# ಇಂದೂ ಸಂಪ್ರದಾಯಗಳು



ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (95) ಗ್ರಂಥಗಳ ರಚನಕಾರರು

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

*www.thraithashakam.org*





# ಇಂದೂ ಸಾಂಪ್ರದಾಯಗಳು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000 **ಬೆಲೆ. 90/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

## ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿಣಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಶಿವರಾಜ**

(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ.–38, ಬೆಂಗಳೂರು–560085

Cell : 9036982829

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)

Cell : 9632418716

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)

Cell : 9611183107, 9164886981

**ಲೀಲಾವತಿ**

ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068

Cell : 08970772028, 07411459912, 07406039453

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ವಿಷಯ ಸೂಚಿಕೆ

# ಶೈವರು

ಆಚರಿಸುವುದು – ಅದ್ವೈತ

ಧರಿಸುವುದು – ಮೂರು ವಿಭೂತಿ ರೇಖೆಗಳು

ಆರಾಧಿಸಲ್ಪಡುವವನು – ಶಂಕರನು

ಆರಾಧನೆ { ಪಂಚಾಕ್ಷರಿ ಮಂತ್ರ
ಓಂ ನಮಃ ಶಿವಾಯ

# ವೈಷ್ಣವರು

ಆಚರಿಸುವುದು –ವಿಶಿಷ್ಟಾದ್ವೈತ (ವೈಷ್ಣವರು)

ಧರಿಸುವುದು – ಮೂರು ನಾಮಗಳು

ಆರಾಧಿಸಲ್ಪಡುವವನು – ವಿಷ್ಣು

ಆರಾಧನೆ { ಅಷ್ಟಾಕ್ಷರಿ ಮಂತ್ರ
ಓಂ ನಮೋ ನಾರಾಯಣಾಯ

# ತ್ರೈತರು

ಆಚರಿಸುವುದು – ತ್ರೈತ

ಧರಿಸುವುದು – ಕಾಲ ಕರ್ಮ ಚಕ್ರಗಳು

ಆರಾಧಿಸಲ್ಪಡುವವನು – ಪರಮಾತ್ಮ

ಆರಾಧನೆ – ತ್ರೈತಾರಾಧನೆ

# ಇಂದೂ ಸಾಂಪ್ರದಾಯಗಳು

ಸಾಂಪ್ರದಾಯಗಳು ಎಂಬ ಮಾತು ಒಂದು ಇಂದೂಮತದಲ್ಲಿಯೇ ಕೇಳಿಸುತ್ತದೆ. ಒಂದು ದೇವಾಲಯಕ್ಕೆ ಹೋಗಿ ಪೂಜೆಗಳು ಮಾಡಿ ಇದು ನಮ್ಮ ಸಾಂಪ್ರದಾಯ ಅನ್ನುವವರೂ ಸಹ ಕೆಲವರಿದ್ದಾರೆ. ಒಂದು ಮದುವೆ ಮಾಡಿ ಸಾಂಪ್ರದಾಯವಾಗಿ ಮದುವೆ ಮಾಡಿದ್ದೇವೆ ಎನ್ನುವವರೂ ಇದ್ದಾರೆ. ಹಾಗೆ ಒಂದು ಗುಂಪಿನವರು ಒಂದೇ ವಿಧವಾದ ವಸ್ತ್ರಗಳನ್ನು ಧರಿಸುತ್ತಾ ಇದು ನಮ್ಮ ಸಾಂಪ್ರದಾಯ ಅನ್ನುವವರೂ ಸಹ ಇದ್ದಾರೆ. ಇನ್ನೂ ವಿವರಿಸಿ ನೋಡಿದರೆ ಇಂದೂ ಮತದಲ್ಲಿ ಒಂದೊಂದು ಕುಲದವರು ಒಂದೊಂದು ಪದ್ಧತಿಯನ್ನು ಅನುಸರಿಸುತ್ತಾ ಇದು ನಮ್ಮ ಕುಲ ಸಾಂಪ್ರದಾಯ ಎನ್ನುತ್ತಿದ್ದಾರೆ. ಹೀಗೆ ಸಾಂಪ್ರದಾಯವೆಂಬ ಮಾತು ಅನೇಕ ಕಡೆ ಕೇಳಿಬರುತ್ತಿದ್ದರೂ ವಾಸ್ತವಕ್ಕೆ ಸಾಂಪ್ರದಾಯಗಳು ಎಂದರೆ ಯಾವುವು ಎಂಬುವುದು ಯಾರಿಗೂ ತಿಳಿಯದಂತಾಗಿದೆ. ಇಂದೂ ಮತ ಹಿಂದೂ ಮತವಾಗಿ ಬದಲಾಗಿಹೋದ ಈಗಿನ ಕಾಲದಲ್ಲಿ, ನಾವು ಹಿಂದೂಗಳೆಂದು ಹೇಳಿಕೊಳ್ಳುತ್ತಾ ತನ್ನ ಮತದ ನಿಜ ಸ್ವರೂಪವನ್ನು ತಿಳಿಯದ ಮನುಷ್ಯ, ಸಾಂಪ್ರದಾಯಗಳೆಂದರೆ ಏನೋ ತಿಳಿಯದೆ ಇದು ಸಾಂಪ್ರದಾಯವೆಂದು ಯಾರು ಏನು ಹೇಳಿದರೂ ಅದನ್ನು ಸಾಂಪ್ರದಾಯವೆಂದು ನಂಬುತ್ತಿದ್ದಾನೆ. ಒಬ್ಬ ಮನುಷ್ಯ ಸತ್ತುಹೋದರೆ ಮೃತದೇಹವನ್ನು ಭೂಮಿಯಲ್ಲಿ ಊತಿಡುವುದನ್ನು ಸಾಂಪ್ರದಾಯವೆಂದು ಕೆಲವರನ್ನುತ್ತಿದ್ದಾರೆ. ಮತ್ತೊಂದು ಪ್ರಾಂತದಲ್ಲಿ ಮೃತ ದೇಹವನ್ನು ಕಟ್ಟಿಗೆಗಳಿಂದ ಸುಡುವುದನ್ನು ಸಾಂಪ್ರದಾಯವೆಂದು ಕೆಲವರು ಎನ್ನುತ್ತಿದ್ದಾರೆ. ಸಾಂಪ್ರದಾಯಗಳ ಬಗ್ಗೆ ನಮಗೆ ತಿಳಿದಿಲ್ಲ, ತಿಳಿದವರು ಹೇಳಿದಂತೆ ಕೇಳುವುದು ಒಳ್ಳೆಯದೆಂದು ಕೆಲವರನ್ನುತ್ತಿದ್ದಾರೆ. ಹಾಗೆ ಹೇಳಿದಂತೆ ಕೇಳಿದರೂ ಒಂದೇ ಕೆಲಸ ಎರಡು ವಿಧಗಳಾಗಿರುವಾಗ ಏನನ್ನು ಸಾಂಪ್ರದಾಯ ಎನ್ನಬೇಕು? ಎನ್ನುವ ಪ್ರಶ್ನೆ ಬಾರದೆ ಇರುವುದಿಲ್ಲ. ಸ್ವಲ್ಪ ತಿಳುವಳಿಕೆ ಇರುವವರೂ ಇಂತಹ ಲೋಪ ಭೂಯಿಷ್ಟವಾದ ಮಾತುಗಳನ್ನು ನೋಡಿ ಇದೆಲ್ಲವೂ ಮೂಢನಂಬಿಕೆ ಎನ್ನುತ್ತಾ, ಅಸಲಾದ ಸತ್ಯವನ್ನು ಹುಡುಕದೆ ಹೇತುವಾದಿಗಳೆಂಬ ಹೆಸರಿನಿಂದ ಸತ್ಯಕ್ಕೆ ದೂರವಾಗುತ್ತಿದ್ದಾರೆ. ಇಂತಹದರಲ್ಲಿ ಸತ್ಯವಾದಿಗಳೆಂಬು (ಆಸ್ತಿಕರೆಂಬು) ವವರು

ಏನನ್ನಾದರೂ ಸಾಂಪ್ರದಾಯ ಎನ್ನಬಹುದು, ಹೇತುವಾದಿಗಳೆನ್ನುವವರು ಏನನ್ನಾದರೂ ಮೂಢನಂಬಿಕೆ ಎನ್ನಬಹುದು. ಇವರಿಬ್ಬರ ಮಧ್ಯದಲ್ಲಿ ನಿಜವಾದ ಸಾಂಪ್ರದಾಯಗಳು ಯಾವತ್ತೋ ಕಣ್ಮರೆಯಾಗಿವೆ. ಸತ್ಯವಾದಿಗಳೆಂಬ ಹೆಸರಿನಲ್ಲಿ ಅಸತ್ಯವಾದಿಗಳಿರುವ ಈ ಕಾಲದಲ್ಲಿ, ಹೇತುವಾದಿಗಳೆಂಬ ಹೆಸರಿನಲ್ಲಿ ನಾಸ್ತಿಕರಿರುವ  ಈ ಕಾಲದಲ್ಲಿ ಆಚರಿಸುವ ಪ್ರತಿಯೊಂದು ಆಸ್ತಿಕರಿಗೆ ಸಾಂಪ್ರದಾಯವಾದರೆ, ತಿಳಿಯದ ಪ್ರತಿಯೊಂದು ನಾಸ್ತಿಕರಿಗೆ ಮೂಢನಂಬಿಕೆ ಯಾಗಿದೆ.

ಇಂತಹ ಸಮಯದಲ್ಲಿ ಇತ್ತ ಆಸ್ತಿಕರಿಗೂ ಅತ್ತ ನಾಸ್ತಿಕರಿಗೂ ಸಾಂಪ್ರದಾಯವೆಂದರೆ ಏನೆಂಬುವುದು ಸೂತ್ರಬದ್ಧವಾಗಿ ತಿಳಿಯಬೇಕು. ಹೂಗಳು ಬಿಡಿಯಾಗಿರುವಾಗ ಅವುಗಳಿಗೆ ಹಾರ ಎಂದು ಹೆಸರು ಬರುವುದಿಲ್ಲ. ದಾರ (ಸೂತ್ರ) ದಿಂದ ಪೋಣಿಸಿದಾಗ, ಒಂದು ಪದ್ಧತಿಯಾಗಿ, ಒಂದು ಕ್ರಮವಾಗಿ ಏರ್ಪಟ್ಟಿರುವುದರಿಂದ ಹಾರ ಎನ್ನುತ್ತಿದ್ದೇವೆ. ಹಾಗೆಯೇ ಯಾರ ಇಷ್ಟಬಂದಂತೆ ಅವರು ಮಾಡುವ ಕೆಲಸಗಳಿಗೆ ಸಾಂಪ್ರದಾಯ ಎನ್ನುವ ಹೆಸರು ಅನ್ವಯಿಸುವು ದಿಲ್ಲ.  ಶಾಸ್ತ್ರ ಎನ್ನುವ ಸೂತ್ರದಿಂದ ಸಂಧಿಸಿದಾಗ ಒಂದು ಅರ್ಥದಿಂದ ಎಲ್ಲಿಯಾದರೂ ಒಂದು ಪದ್ಧತಿಯಾಗಿ ಇರುವುದರಿಂದ ಆ ಕೆಲಸವನ್ನು ಸಾಂಪ್ರದಾಯ ಎನ್ನುತ್ತಿದ್ದೇವೆ. ಹೂವು ದಾರದ ಜೊತೆ ಪೋಣಿಸದೆ ಹೋದರೆ ಹೇಗೆ ಹಾರ ಆಗುವುದಿಲ್ಲವೋ, ಹಾಗೆಯೇ ಕಾರ್ಯವನ್ನು ಶಾಸ್ತ್ರದೊಂದಿಗೆ ಸೇರಿಸದೆಹೋದರೆ ಸಾಂಪ್ರದಾಯ ಅಲ್ಲ. ಒಂದು ಅಂಗುಲ (ಒಂದು ಇಂಚು) ದಪ್ಪ ಇರುವ ಹಗ್ಗದಲ್ಲಿ ಅರ್ಧ ಅರ್ಧ ಕಡಿಮೆ ಮಾಡುತ್ತಾ ಹೋದರೆ ಚಿಕ್ಕಸೈಜು ದಾರವಾಗುತ್ತದೆ. ಅಂಗುಲದಲ್ಲಿ ಆರನೇ ದಪ್ಪವಾದ ಸೂಜಿ ದಪ್ಪವಿರುವ ದಾರದಿಂದ ಹೂವುಗಳನ್ನು ಹಾರವಾಗಿ ಪೋಣಿಸಬಹುದು. ಹಾಗೆ ಶಾಸ್ತ್ರಗಳಲ್ಲಿ ಆರನೆಯದಾದ, ಐದುಸ್ಥಾನಗಳನ್ನು ದಾಟಿ ಆರನೇ ಸ್ಥಾನದಲ್ಲಿರುವ ಬ್ರಹ್ಮವಿದ್ಯಾ ಶಾಸ್ತ್ರದಿಂದ ಒಂದು ಕಾರ್ಯವನ್ನು ನಿರ್ದೇಶಿಸಲ್ಪಟ್ಟಾಗಲೆ ಆ ಕೆಲಸ ಸಾಂಪ್ರದಾಯ ವಾಗುತ್ತದೆ. ಸೂತ್ರಬದ್ಧತೆ ಇಲ್ಲದೆ ಹೋದರೆ ಹೂವು ಹಾರ ಹೇಗೆ ಆಗುವುದಿಲ್ಲವೊ,

ಹಾಗೆಯೇ ಬ್ರಹ್ಮವಿದ್ಯಾ ಶಾಸ್ತ್ರಬದ್ಧತೆ ಇಲ್ಲದ ಕಾರ್ಯಗಳು ಸಾಂಪ್ರದಾಯಗಳು ಅಲ್ಲ. ಹಾರದಲ್ಲಿ ದಾರ ಅಡಗಿರುವಂತೆ ಕಾರ್ಯದಲ್ಲಿ ಭಾವವು ಒಳಗೊಂಡಿರಬೇಕು. ಕಿತ್ತುಹೋಗದ ದಾರವಿಲ್ಲದೆ ಹಾರ ಇರುವುದಿಲ್ಲ, ಕೆಡದ ಭಾವವಿಲ್ಲದೆ ಸಾಂಪ್ರದಾಯ ಇರುವುದಿಲ್ಲ. ಈಗ ಕೆಲವರೊಂದು ಪ್ರಶ್ನೆ ಕೇಳಬಹುದು. ಕೆಲವರು ಮದುವೆ ಕಾರ್ಯದಲ್ಲಿ ತಲಂಬರಗಳು ಸುರಿಯುವುದು, ಅಕ್ಷತೆಗಳು ಹಾಕುವುದು ಮೊದಲಾದ ಕೆಲಸಗಳೆಲ್ಲ ಸಾಂಪ್ರದಾಯಗಳೆಂದು ಹೆಸರಿಟ್ಟು ಮಾಡುತ್ತಿದ್ದಾರಲ್ಲವೆ! ಅಂತಹದರಲ್ಲಿ ಸಾಂಪ್ರದಾಯಗಳು ಯಾರಿಗೂ ತಿಳಿಯದಂತೆ ಹೋಗಿವೆ ಎಂದು ನೀವು ಹೇಗೆ ಎನ್ನುತ್ತಿದ್ದೀರೆಂದು ನೀವು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಕೋಲೆ ಬಸವಣ್ಣನ ಕೊರಳಲ್ಲಿ ಹೂವಿನಹಾರ ಇದ್ದರೂ ಆ ಎತ್ತಿಗೆ ಇದು ಹಾರವೆಂದು ತಿಳಿಯದು, ಅದರ ಬೆಲೆ ತಿಳಿಯದು. ಅದರ ಕೊರಳಲ್ಲಿ ಹೂವಿನಹಾರ ಇದ್ದರೂ, ದಪ್ಪನೆಯ ಹಗ್ಗವಿದ್ದರು ಎರಡೂ ಒಂದೇ. ಹಾಗೆಯೇ ವಿವರವಿಲ್ಲದ ಅಜ್ಞಾನಿಯ ಕೆಲಸದಲ್ಲಿ ಸಾಂಪ್ರದಾಯವಿದ್ದರೂ ಅವನಿಗೆ ಇದು ಸಾಂಪ್ರದಾಯವೆಂದು ತಿಳಿದಿಲ್ಲ. ಅದರ ಬೆಲೆಯು ತಿಳಿಯದು. ಅವನ ಕೆಲಸದಲ್ಲಿ ಸಾಂಪ್ರದಾಯವಿದ್ದರೂ ಅಸಂಪ್ರದಾಯ ವಿದ್ದರು ಎರಡು ಒಂದೇ. ಮದುವೆ ಕಾರ್ಯದಲ್ಲಿ ಮದುವೆ ಮಾಡುವವರಿಗಾಗಲಿ, ಮಾಡಿಸಿಕೊಳ್ಳುವವರಿಗಾಗಲಿ, ನೋಡುವವರಿಗಾಗಲಿ ಅರ್ಥ ತಿಳಿಯದಿರುವಾಗ ಅದು ಸಾಂಪ್ರದಾಯವಾದರೂ ತಿಳಿಯದ ರಹಸ್ಯವೇ, ಆದ್ದರಿಂದ ಅದು ಸಾಧಾರಣ ಕೆಲಸಗಳಲ್ಲಿ ಒಂದು ಕೆಲಸವಾಗುತ್ತಿದೆಯಾಗಲಿ, ಸಾಂಪ್ರದಾಯ ಯಾರಿಗೂ ಆಗಲಿಲ್ಲ. ಈಮಧ್ಯ ಕಾಲದಲ್ಲಿ ಒಂದು ದೊಡ್ಡ ಮದುವೆ ನಡೆದಿದೆ. ಟಿ.ವಿ ಅವರು ಸಹ ಆ ದೃಶ್ಯಗಳನ್ನು ಟಿ.ವಿಯಲ್ಲಿ ತೋರಿಸಿದ್ದಾರೆ. ಅಲ್ಲಿನ ಪುರೋಹಿತರು ಆ ಮದುವೆಯಲ್ಲಿ ಪ್ರತಿ ಕಾರ್ಯವನ್ನು ಸಾಂಪ್ರದಾಯವಾಗಿ ಮಾಡಿದ್ದೇವೆಂದು ಹೇಳುವುದು ಕೇಳಿದ್ದೇವೆ. ಬಾಯಿ ಮಾತಿಗೆ ಆ ವಿಧವಾಗಿ ಹೇಳುತ್ತಿದ್ದಾರಾಗಲಿ ಅಲ್ಲಿನ ಪುರೋಹಿತರಿಗಾಗಲಿ, ವಧುವರರಿಗಾಗಲಿ, ಮದುವೆಗೆ ಬಂದ ಬಂಧು ಮಿತ್ರರಿಗಾಗಲಿ ಸಾಂಪ್ರದಾಯ ಎನ್ನುವ ಮಾತಿಗೆ ಅರ್ಥವೇ ತಿಳಿದಿಲ್ಲವೆಂದು ಹೇಳಬಹುದು. ಅಲ್ಲಿ ಒಂದು ಕೆಲಸಕ್ಕೂ ಸಹ ಅರ್ಥ

ತಿಳಿಯದಂತೆ ಹೋಗಿದೆ. ಅರ್ಥ ತಿಳಿಯದ ಕೆಲಸ ವ್ಯರ್ಥ. ಆದ್ದರಿಂದ ಅದು ಸಾಂಪ್ರದಾಯ ಅಲ್ಲವೆಂದು ತಿಳಿದಿದೆ. ಸಾಂಪ್ರದಾಯಗಳು ತಿಳಿಯದಿರುವುದರಿಂದ ಕೆಲವರು ರಿಜಿಷ್ಟರ್ ಆಫೀಸ್‌ಗಳಿಗೆ ಹೋಗಿ ಗಂಡನನ್ನು ಹೆಂಡತಿ, ಹೆಂಡತಿಯನ್ನು ಗಂಡ ರಿಜಿಷ್ಟರ್ ಮಾಡಿಸಿಕೊಳ್ಳುತ್ತಿದ್ದಾರೆ. ಈ ರೀತಿ ಸ್ವಲ್ಪಕಾಲ ಕಳೆದು ಹೋದರೆ ಮುಂಬರುವ ಪೀಳಿಗೆಗೆ ಸಾಂಪ್ರದಾಯಗಳೆಂಬ ಮಾತೇ ತಿಳಿಯದಂತೆ ಹೋಗುತ್ತದೆ. ಅಂತಹ ಅಪಾಯ ಬಾರದಂತೆ ಸಾಂಪ್ರದಾಯಗಳೆಂದರೆ ಸೂತ್ರಬದ್ಧವಾಗಿ, ಶಾಸ್ತ್ರಬದ್ಧವಾಗಿ ಪ್ರತಿಮನುಷ್ಯ ತಿಳಿಯಬೇಕಾದ ಅವಶ್ಯಕತೆ ಇದೆ. ಇನ್ನು ಸಾಂಪ್ರದಾಯಗಳು ಎಂದರೆ ಏನೆಂಬುವುದು ಹೇಳಬೇಕಾದವನನ್ನೇ ಕೇಳಿ ತಿಳಿದುಕೊಳ್ಳೋಣ.

ಪ್ರತಿ ದಿನ ಮಾನವನು ತನ್ನ ಜೀವನ ಗಮನದಲ್ಲಿ ಯಾವುದೋ ಒಂದು ಕೆಲಸವನ್ನು ಮಾಡುತ್ತಲೇ ಇದ್ದಾನೆ. ಪ್ರತಿ ಕೆಲಸದ ಹಿಂದೆ ಯಾವುದೋ ಒಂದು ಆದಾಯ ಇರುತ್ತದೆ. ಆದಾಯ ಯಾವ ರೂಪದಲ್ಲಿದ್ದರೂ ಅದು ಕಾಣಿಸುವುದಾಗಿರುತ್ತದೆ. ಧನವಾಗಲಿ, ಧಾನ್ಯವಾಗಲಿ, ಬಂಗಾರವಾಗಲಿ ಯಾವ ರೂಪದಲ್ಲಿದ್ದರು ಅದು ಕಾಣಿಸುವ ಫಲಿತವಾಗಿಯೇ ಲೆಕ್ಕಿಸಲಾಗುತ್ತದೆ. ಕಾರ್ಯಕ್ಕೆ ಪ್ರತಿಫಲವಾಗಿ ಕಾಣಿಸುವುದನ್ನು ಆದಾಯ ಎಂದು ಹೇಳುತ್ತಿದ್ದೇವೆ. ಮುಖ್ಯವಾಗಿ ಗಮನಿಸಬೇಕಾಗಿರುವುದು ಏನೆಂದರೆ ಪ್ರತಿ ಕಾರ್ಯದಲ್ಲಿ ಕಾಣಿಸುವ ಆದಾಯ ಇರುವಂತೇ ಕಾಣಿಸದ ಆದಾಯವೂ ಒಂದು ಇದೆ. ಅದನ್ನೇ ಕರ್ಮಫಲಿತ ಎನ್ನುತ್ತಿದ್ದೇವೆ. ಕಾಣಿಸುವ ಫಲಿತ ಧನ, ಧಾನ್ಯ, ಕನಕ, ವಸ್ತುವಾಹನ ರೂಪಗಳಲ್ಲಿ ಅನೇಕ ವಿಧಗಳಾಗಿರುವಾಗ, ಕಾಣಿಸದ ಫಲಿತವಾದ ಕರ್ಮ ಕೇವಲ ಎರಡು ವಿಧಗಳಾಗಿಯೇ ಇದೆ. ಅದರಲ್ಲಿ ಒಂದು ಪಾಪ, ಎರಡನೆಯದು ಪುಣ್ಯ. ಇದರಿಂದ ಕೆಲಸದಲ್ಲಿ ಬರುವ ಆದಾಯಗಳು ಎರಡು ವಿಧಗಳಾಗಿ ಕಾಣಿಸುವವು, ಕಾಣಿಸದಿರುವವೆಂದು ತಿಳಿಯುತ್ತದೆ. ಕಾಣಿಸುವವು ಬಹಳ ವಿಧಗಳು ಇರುವಾಗ, ಕಾಣಿಸದಿರುವವು ಎರಡು ವಿಧಗಳು ಮಾತ್ರವೇ ಎಂದು ಸಹ ತಿಳಿಯುತ್ತದೆ. ಮಾನವ ಜೀವನದಲ್ಲಿ ಕಾಣಿಸುವ ಆದಾಯಕ್ಕಿಂತ ಕಾಣಿಸದ ಆದಾಯವೇ

ಬಹಳ ಮುಖ್ಯವಾದುದು. ಕಾಣಿಸುವ ಆದಾಯ ಆ ಜೀವನದಲ್ಲಿಯೇ ಉಪಯೋಗಪಡಬಹುದು, ಉಪಯೋಗಪಡದೆ ಇರಬಹುದು. ಕಾಣಿಸದ ಆದಾಯ ನಂತರದ ಜನ್ಮಗಳವರೆಗೂ ಬಂದು ತಪ್ಪದೆ ಸಂಪಾದಿಸಿಕೊಂಡವನಿಗೆ ಉಪಯೋಗಪಡುತ್ತದೆ. ಎಷ್ಟು ವಿಧಗಳಲ್ಲಿ ನೋಡಿದರೂ ಕಾಣಿಸುವ ಆದಾಯಕ್ಕಿಂತ ಕಾಣಿಸದ ಆದಾಯವೇ ಬಹಳ ಮುಖ್ಯವಾದುದು. ಆದ್ದರಿಂದ ಕೆಲಸದಲ್ಲಿ ಬರುವ ಕಾಣಿಸದ ಕರ್ಮ ಫಲಿತಕ್ಕೆ ವಿಶೇಷತೆಯನ್ನು ಕಲ್ಪಿಸಿ, **"ಪ್ರ" ಎಂಬ ಶಬ್ದವನ್ನು ಜೋಡಿಸಿ ಪ್ರ+ಆದಾಯ = ಪ್ರದಾಯ ಎಂದಿದ್ದಾರೆ. ಇದರಿಂದ ಆದಾಯ ಎಂದರೆ ಕಾಣಿಸುವ ಧನ, ಕನಕ, ವಸ್ತು, ವಾಹನಗಳೆಂದು, "ಪ್ರದಾಯ" ಎಂದರೆ ಕಾಣಿಸದ ಪಾಪ, ಪುಣ್ಯವೆಂದು ತಿಳಿಯಬಹುದು.**

ಪ್ರಸ್ತುತ ಜೀವನದಲ್ಲಿ ಉಪಯೋಗಪಡುವ ಧನವು ಆದಾಯವಾಗಿದ್ದು, ನಂತರ ಜೀವನದಲ್ಲಿ ಉಪಯೋಪಡುವ ಕರ್ಮ ಪ್ರದಾಯವೆಂದು ತಿಳಿಯುತ್ತದೆ. ಆದಾಯವಾದರು, ಪ್ರದಾಯವಾದರು ಮನುಷ್ಯ ಅನುಭವಿಸುವವೆ. ಒಬ್ಬ ಮನುಷ್ಯ ಸಂಪಾದಿಸಿಕೊಳ್ಳುವ ಸಂಪಾದನೆಗಳು ಅನುಭವಿಸುವವೇ ಅಲ್ಲದೆ ಅನುಭವಿಸದೆ ಇರುವವೂ ಸಹ ಇವೆ. ಇದರಿಂದ ಆದಾಯಗಳನ್ನು ಮೂರು ವಿಧಗಳಾಗಿ ವಿಭಜಿಸಬಹುದು. ಅನುಭವಿಸುವ ಆದಾಯಗಳು ಎರಡು ವಿಧಗಳು, ಅನುಭವಿಸದ ಆದಾಯ ಒಂದು ವಿಧ. ಒಟ್ಟಾರೆ ಮೂರು ವಿಧಗಳ ಆದಾಯಗಳು ಇವೆ. ಮೂರನೇ ವಿಧದ ಆದಾಯವೂ ಸಹ ಕಾಣಿಸದಿರುವುದೇ ಆದರೂ, ಕರ್ಮದಂತೆ ತಲೆಯಲ್ಲಿ ಸೇರಿದರೂ, ಕರ್ಮಕ್ಕೆ ವಿರುದ್ಧವಾದುದಾಗಿ ಕರ್ಮವನ್ನು ನಾಶಮಾಡುವುದಾಗಿರುತ್ತದೆ. ಈ ಮೂರನೇ ಆದಾಯವನ್ನೇ ದೈವಜ್ಞಾನ ಅನ್ನುತ್ತಿದ್ದೇವೆ. ಮೊದಲನೆಯದಕ್ಕಿಂತ ಎರಡನೆಯದು ಪ್ರಮುಖ್ಯವಾದರೆ, ಎರಡನೆಯದಕ್ಕಿಂತ ಮೂರನೆಯದು ಬಹಳ ಪ್ರಾಮುಖ್ಯವಾದುದು. **ಧನಕ್ಕಿಂತ ವಿಧಿ (ಕರ್ಮ) ದೊಡ್ಡದು. ವಿಧಿಗಿಂತ ಜ್ಞಾನ ದೊಡ್ಡದು. ಹಿಂದೀ ಭಾಷೆಯಲ್ಲಿಯೂ ಸಂಸ್ಕೃತ ಭಾಷೆಯಲ್ಲಿಯೂ "ಸ" ಎಂದರೆ ಭಕ್ತಿ, ಜ್ಞಾನ ಅನ್ನುವ ವಿವರ ಇದೆ. ಸಂತ್ ಎಂದರೆ ಭಕ್ತರು, ಜ್ಞಾನಿಗಳು ಅನ್ನುವುದು ಸಹ ಇದೆ.**

**ಒಳ್ಳೆಯದನ್ನು, ದೊಡ್ಡ ತನವನ್ನು, ದೈವಿಕ ಅರ್ಥವನ್ನು ಸೂಚಿಸುವ "ಸ" "ಪ್ರ" ಅನ್ನು ದೈವಜ್ಞಾನಕ್ಕೆ ಜೋಡಿಸಿ ಸ+ಪ್ರ+ಆದಾಯ= ಸಂಪ್ರದಾಯ ಎಂದಿದ್ದಾರೆ.** ಒಂದು ಕೆಲಸದಲ್ಲಿ ಕಾಣಿಸದ ಆದಾಯವಾದ ದೈವಜ್ಞಾನ ಇದ್ದರೆ, ಆ ಕೆಲಸದಲ್ಲಿನ ಅರ್ಥವಾದ ಆದಾಯವು ನಮ್ಮ ತಲೆಗೇರಿದಾಗ ಅದು ಸಾಮಾನ್ಯ ಆದಾಯವಲ್ಲದೆ, ಕರ್ಮದಂತೆ ಪ್ರದಾಯವಾಗದೆ, ಕರ್ಮಕ್ಕಿಂತ ಮಿಂಚಿದ ಸಾಂಪ್ರದಾಯವಾಗುತ್ತದೆ. ಒಂದು ಕೆಲಸದಲ್ಲಿ ದೈವಜ್ಞಾನ ಅಡಕವಾಗಿದ್ದರೂ ಅದರಲ್ಲಿನ ವಿವರವು ನಮ್ಮ ತಲೆಗೇರದಿದ್ದಾಗ ಅದು ಸಾಂಪ್ರದಾಯವಾಗಿ ಲೆಕ್ಕಿಸಲ್ಪಡುವುದಿಲ್ಲ. ಒಂದು ಕೆಲಸ ದೈವಜ್ಞಾನ ಅರ್ಥದಿಂದ ಕೂಡಿಕೊಂಡಿರುವುದೆಂದು ತಿಳಿದು ಮಾಡಿದಾಗ ಅದು ಸಾಂಪ್ರದಾಯವಾಗುತ್ತದೆ.

ಐದನೆಯ ಶಾಸ್ತ್ರವಾದ ಜೋತಿಷ್ಯಶಾಸ್ತ್ರದ ಪ್ರಕಾರ ದೈವಜ್ಞಾನಕ್ಕೆ ಅಧಿಪತಿ ಚಂದ್ರನು. ಆದ್ದರಿಂದ ಜ್ಞಾನಚಿಹ್ನೆಯಾಗಿ ಚಂದ್ರನನ್ನೇ ತೋರಿಸುತ್ತಿದ್ದೇವೆ. ಕರ್ಮಶೇಷವಿರುವ ಯೋಗಿ ಆ ಜನ್ಮದಲ್ಲಿ ಮೋಕ್ಷ ಹೊಂದದೆ ಹೋದರೆ ಮತ್ತೆ ಜನ್ಮದಲ್ಲಿ ಚಂದ್ರತೇಜಸ್ಸು ಹೊಂದಿ ಹುಟ್ಟುತ್ತಾನೆಂದೂ ಸಹ ಭಗವದ್ಗೀತೆಯ ಅಕ್ಷರಪರಬ್ರಹ್ಮಯೋಗದಲ್ಲಿ 25ನೇ ಶ್ಲೋಕದಲ್ಲಿ **"ಚಾಂದ್ರಮಸಂ ಜ್ಯೋತಿರ್ಯೋಗಿ ಪ್ರಾಪ್ಯನಿವರ್ತತೆ'** ಸ್ವತಃ ಭಗವಂತನೇ ಹೇಳಿದ್ದಾನೆ. ಇದರಿಂದ ಚಂದ್ರಗ್ರಹ ಜ್ಞಾನಚಿಹ್ನೆಯಾಗಿದೆ ಎಂದು ತಿಳಿದು ದೈವಜ್ಞಾನವಿರುವ ಮನುಷ್ಯನನ್ನು ಚಂದ್ರನಿಗೆ ಸಮಾನವಾಗಿ ಹೋಲಿಸಿ ಇಂದೂ ಎನ್ನುತ್ತಿದ್ದರು. ದೈವಜ್ಞಾನ ಇರುವ ಕೆಲಸವನ್ನು ಇಂದೂ ಸಾಂಪ್ರದಾಯವೆಂದೂ ಸಹ ಎನ್ನುತ್ತಿದ್ದರು. **ಯಾವ ಮತದಲ್ಲಾದರೂ ದೈವಜ್ಞಾನದಲ್ಲಿ ಇರುವವನು ಇಂದೂವೇ, ದೈವಜ್ಞಾನವಿರುವ ಯಾವ ಕಾರ್ಯವಾದರೂ ಇಂದೂ ಸಾಂಪ್ರದಾಯವೇ.** ಚಂದ್ರಬಿಂಬ ಜ್ಞಾನಕ್ಕೆ ಚಿಹ್ನೆಯಾದರೆ, ನಕ್ಷತ್ರ ಮೋಕ್ಷಕ್ಕೆ (ದೇವರಿಗೆ) ಗುರುತೆಂದು ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎಂಬ ಪುಸ್ತಕದಲ್ಲಿ ಮೊದಲೇ ತಿಳಿಸಿದ್ದೇವೆ. ಅಭಿವೃದ್ಧಿ ಹೊಂದುತ್ತಿರುವ ಅರ್ಧಚಂದ್ರಾಕಾರವನ್ನು ತಲೆ ಮೇಲೆ ಇಟ್ಟುಕೊಂಡ ಶಂಕರನು ನನ್ನ ತಲೆಯಲ್ಲಿ ದೈವಜ್ಞಾನ ಅಭಿವೃದ್ಧಿ ಆಗುತ್ತಿದೆ ಎಂದು ತಿಳಿಸುವಂತೆ

ಕಾಣಿಸುತ್ತಿದೆ. ಚಂದ್ರನ ವಿವರ ತಿಳಿದವನಾದ್ದರಿಂದ ಶಂಕರನನ್ನು ಇಂದೂ ಎಂದು, ತಲೆ ಮೇಲೆ ಅರ್ಥತಿಳಿದು ಅರ್ಧ ಚಂದ್ರಾಕಾರವನ್ನು ಇಟ್ಟುಕೊಳ್ಳುವ ಕೆಲಸ ಮಾಡಿದ್ದಾನಾದ್ದರಿಂದ ಇಂದೂಸಾಂಪ್ರದಾಯವನ್ನು ಆಚರಿಸಿ ತೋರಿಸಿದ್ದಾನೆಂದು ಹೇಳಬಹುದು. ಒಂದು ಅರ್ಧಚಂದ್ರಾಕಾರವನ್ನು ಇಟ್ಟುಕೊಂಡ ಶಂಕರನನ್ನೇ ನಾವು ಇಂದೂ ಅಂದಾಗ ಅರ್ಧಚಂದ್ರಾಕಾರವನ್ನು, ನಕ್ಷತ್ರವನ್ನು ಇಟ್ಟುಕೊಂಡವರನ್ನು ಏನನ್ನಬೇಕು? ಇಂದೂವೆ ಎನ್ನಬಹುದು. ಅವರು ಆ ಕೆಲಸದ ಅರ್ಥ ಬೆಲೆ ತಿಳಿದು ಮಾಡಿದರೆ ಅದು ಇಂದೂಸಾಂಪ್ರದಾಯವೇ ಎನ್ನಬಹುದು. ಜ್ಞಾನವಿವರ ಇಲ್ಲದ ಕೆಲಸ ಸಾಂಪ್ರದಾಯವಲ್ಲ. ಈ ದಿನ ಇತರ ಮತಗಳಲ್ಲಿಯೂ ಸಹ ಕಾಲುಂಗುರ, ಅರ್ಧಚಂದ್ರಾಕಾರ, ನಕ್ಷತ್ರ ಪತಾಕೆಗಳು ಇದ್ದು ಅಲ್ಲಿಯೂ ಸಹ ಇಂದೂಸಾಂಪ್ರದಾಯಗಳ ಆಚರಣೆಗಳು ಕಾಣಿಸುತ್ತಿವೆ. ಭಾನುವಾರ (ಆದಿವಾರ) ರಜಾದಿನ ಕೃತಯುಗದಿಂದ ಆಚರಣೆಗೆ ಬಂದಿರುವ ಸ್ವಚ್ಛವಾದ ಇಂದೂಸಾಂಪ್ರದಾಯ. ಈ ದಿನಗಳಲ್ಲಿಯೂ ಸಹ ಈ ದೇಶದಲ್ಲಿ, ವಿದೇಶಗಳಲ್ಲಿ ಭಾನುವಾರ ರಜಾದಿನವಾಗಿಯೇ ಇದ್ದೂ ನಿಮ್ಮ ಬುದ್ಧಿಗಳಿಗೆ ನನ್ನ ಬೆಲೆ ತಿಳಿಯದಿದ್ದರು ನಾನು ಸಜೀವವಾಗಿಯೇ ಇದ್ದೇನೆಂದು ಅಣಕಿಸುತ್ತಿದೆ. ನಮ್ಮ ಮತ ಬೇರೆ ಎಂದವರನ್ನು ಬಿಟ್ಟು ಇಂದೂದೇಶದಲ್ಲಿ ಹುಟ್ಟಿ ಕೊನೆಗೆ ಹಿಂದೂಗಳಾಗಿ ಹೋದ ನೀವೂ ಸಹ ನನ್ನನ್ನು ಗುರುತಿಸಲಾರದೆ ಹೋದರೆ ನಿಮ್ಮನ್ನು ಏನನ್ನಬೇಕು ಎಂದು ಪ್ರಶ್ನಿಸುತ್ತಿದೆ.

ಧರ್ಮಗಳಿಗೆ ಹಾನಿ ಏರ್ಪಡಬಹುದಾಗಲಿ ನಾಶ ಏರ್ಪಡುವುದಿಲ್ಲವೆಂಬ ವಿಷಯವನ್ನು ಗೀತೆಯಲ್ಲಿ ಭಗವಂತನೇ ಹೇಳಿದ್ದಾನೆ. ಆದ್ದರಿಂದ ನಮಗೆ ತಿಳಿಯದಿದ್ದರು ಇಂದೂಸಾಂಪ್ರದಾಯಗಳು ಸ್ವಲ್ಪವೂ ಚಕ್ಕು ಚದರದಂತೆ, ನಾಶವಾಗದಂತೆ ನಮ್ಮ ಮಧ್ಯದಲ್ಲಿಯೇ ಇವೆ. ಇಂದೂಸಂಪ್ರದಾಯಗಳು ವಿದೇಶಗಳಲ್ಲಿಯೂ ಸಹ ಕಾಣಿಸುತ್ತವೆ. ಇದರಿಂದ ಪೂರ್ವದಲ್ಲಿ ಇಂದೂ ಸಾಂಪ್ರದಾಯಗಳು ವಿಶ್ವವ್ಯಾಪ್ತಿಯಾಗಿ ಇರುತ್ತಿದ್ದವೆಂದು ತಿಳಿಯುತ್ತದೆ. ಈದಿನ ಅವುಗಳ ವಿವರ ತಿಳಿದರೆ ದೇಶವಿದೇಶಗಳಲ್ಲಿರುವವರೆಲ್ಲರೂ ಇಂದೂಗಳೆ ಆಗುತ್ತಾರೆ. ಆ ದಿನ ವಿಶ್ವ ಇಂದೂತ್ವ ಏರ್ಪಡುತ್ತದೆ. ಸಂಪ್ರದಾಯಗಳ ವಿವರ

ತಿಳಿಯದೆಹೋದರೆ ದೇಶ ಇಂದೂತ್ವ ಸಹ ಏರ್ಪಡುವುದಿಲ್ಲವೆಂದು ತಿಳಿಸುತ್ತಿದ್ದೇವೆ. ಆದ್ದರಿಂದ ಕೆಲವರಾದರು ನಮ್ಮ ಮಧ್ಯ ಇರುವ ಸಾಂಪ್ರದಾಯಗಳನ್ನು ತಿಳಿದು ಮೊದಲು ಈ ದೇಶದಲ್ಲಿ ಇಂದೂತ್ವವನ್ನು ಏರ್ಪಡಿಸಿದರೆ ನಂತರ ವಿಶ್ವವ್ಯಾಪ್ತಿಯಾಗಿ ತನ್ನಷ್ಟಕ್ಕೆ ತಾನೇ ಆಗುತ್ತದೆ. ಹಾಗೆ ಅಲ್ಲದೆ ನಾವು ಹಿಂದೂಗಳೆಂದರು, ವಿಶ್ವಹಿಂದೂಗಳೆಂದರೂ ಪ್ರಯೋಜನೆ ಇರುವುದಿಲ್ಲ. ನಾವು ಮೊದಲು ಇಂದೂಗಳಾಗಿ ಬದಲಾಗಿ ಇತರರಿಗೆ ನೀನೂ ಸಹ ಇಂದೂವೆ ಎಂಬ ಜ್ಞಾಪಕ ಉಂಟುಮಾಡಿದರೆ ಒಳ್ಳೆಯದು. ನಾವು ಇಂದೂಗಳಾಗಿ ಬದಲಾಗುವುದಕ್ಕೆ ನಮ್ಮ ಮಧ್ಯದಲ್ಲಿ ಪೂರ್ವದಿಂದ ಅರ್ಥ ಇಲ್ಲದಂತೆ ಆಚರಣೆಯಲ್ಲಿರುವ ಕೆಲಸಗಳನ್ನು ತಿಳಿದುಕೊಳ್ಳೋಣ. ಅವುಗಳಲ್ಲಿನ ಅರ್ಥ ವಿವರವನ್ನು ತಿಳಿದುಕೊಳ್ಳೋಣ. **ಪ್ರತಿಯೊಬ್ಬರೂ ಕಾಣಿಸುವ ಆದಾಯಕ್ಕಿಂತ ಕಾಣಿಸದ ಆದಾಯವಾದ ಸಾಂಪ್ರದಾಯಕ್ಕೆ ಬೆಲೆ ಕೊಡಿ**. ಇಂದೂಗಳಾಗಿ ಬದಲಾಗುವುದಕ್ಕೆ ಸಾಂಪ್ರದಾಯಗಳು ಏನೋ ತಿಳಿದುಕೊಳ್ಳಿ.



# ಶಿಶುವನ್ನು ಮೊರದಲ್ಲಿ ಇಡುವುದು

ಮಾನವನ ಜೀವನ ಹುಟ್ಟಿನಿಂದ ಪ್ರಾರಂಭವಾಗುತ್ತದೆ. ಹುಟ್ಟಿದಾಗಿನಿಂದ ಪ್ರಾರಂಭವಾದ ಜೀವನ ಮರಣದೊಂದಿಗೆ ಅಂತ್ಯವಾಗುತ್ತದೆ. ಹುಟ್ಟಿನಿಂದ ಪ್ರಾರಂಭವಾದ ಪ್ರಾರಬ್ಧಕರ್ಮ ಮರಣದಿಂದ ಆ ಜನ್ಮದಲ್ಲಿಯೇ ಮುಗಿದು ಹೋಗುತ್ತದೆ. ಹುಟ್ಟಿನಲ್ಲಿಯೂ, ಮರಣದಲ್ಲಿಯೂ ಮಧ್ಯ ಜೀವನದಲ್ಲಿಯೂ ಇಂದೂಧರ್ಮಗಳು ಮಾನವನೊಂದಿಗೆ ಮೇಳೈಸಿಕೊಂಡಿವೆ. ಮೊದಲು ಹುಟ್ಟುವುದರಲ್ಲಿನ ವಿಷಯವನ್ನು ನೋಡೋಣ. ಶಿಶುವು ಹುಟ್ಟಿದ ನಂತರ ಪ್ರಾಣ ಬಂದಕೂಡಲೆ, ಹೊಕ್ಕಳ ಕರುಳನ್ನು ಕತ್ತರಿಸದೆಯೇ, ಮೊರದಲ್ಲಿ ಶಿಶುವನ್ನು ಮಲಗಿಸಿಡುವ ಆಚರಣೆ ಪೂರ್ವದಿಂದ ಇರುವುದು. ಈಗಲೂ ಎಲ್ಲಿಯಾದರೂ ಶೇಕಡ ಒಂದರಷ್ಟು ಮೊರದಲ್ಲಿ ಮಲಗಿಸಿಡುವ ಸಾಂಪ್ರದಾಯ ಇದೆಯೇನೋ

ಆಗಲಿ ಶೇ.99 ರಷ್ಟು ಪೂರ್ತಿ ಇಲ್ಲದಂತೆ ಹೋಗಿದೆ ಎಂದು ಹೇಳಬಹುದು. ಆ ಸಾಂಪ್ರದಾಯವು ಈಗಿರುವಂತೆ ಎಲ್ಲಿಯೂ ತಿಳಿಯದಿದ್ದರೂ ಪೂರ್ವದಲ್ಲಿ ಎಲ್ಲರೂ ಹುಟ್ಟಿದ ಮಗುವನ್ನು ಮೊರದಲ್ಲಿ ಇಡುತ್ತಿದ್ದರು. ಹಾಗೆ ಮಲಗಿಸುವುದ ರಿಂದ ನೋಡುವವರಿಗೆ ಸ್ವಲ್ಪ ಜ್ಞಾನ ಅರ್ಥವಾಗುವಂತೆ ಮಾಡಿದ್ದಾರೆ. ಪೂರ್ವದಲ್ಲಿ ಎಲ್ಲರೂ ಆ ಕೆಲಸಕ್ಕೆ ಅರ್ಥತಿಳಿದು ತಪ್ಪದೆ ಹಾಗೆ ಮಲಗಿ ಸಿಡುತ್ತಿದ್ದರು. ಮೊರದಲ್ಲಿಯೇ ಹೊಕ್ಕಳ ಕರುಳನ್ನು ಕತ್ತರಿಸುತ್ತಿದ್ದರು. ಹೊಕ್ಕಳ ಕರುಳನ್ನು ಕತ್ತರಿಸಿದ ನಂತರ ಮೊರದಿಂದ ಪಕ್ಕಕ್ಕೆ ತೆಗೆಯುತ್ತಿದ್ದರು. ಆಗಿನವರ ಸಾಂಪ್ರದಾಯಕ್ಕೆ ಅರ್ಥವೇನೋ ಆ ಕಾಲಕ್ಕೆ ಹೋಗಿ ನೋಡಿದರೆ ಈ ವಿಧವಾಗಿದೆ.

ಪೂರ್ವದಲ್ಲಿ ಎಲ್ಲರೂ ಅವರವರ ಮನೆಗಳಲ್ಲಿ ಮೊರವನ್ನು ಉಪಯೋಗಿಸುತ್ತಿದ್ದರು. ಮೊರ ಎಂದರೆ ಏನೆಂಬುದು ಸಹ ಈ ಕಾಲದಲ್ಲಿ ಕೆಲವರಿಗೆ ತಿಳಿಯದಂತಾಗಿದೆ. ಈಗಲೂ ಸಣ್ಣ ಸಣ್ಣ ಗ್ರಾಮಗಳಲ್ಲಿ ಧಾನ್ಯವನ್ನು ಶುಭ್ರಮಾಡಲು ಮೊರವನ್ನು ಉಪಯೋಗಿಸುತ್ತಿದ್ದಾರೆ. ನಾವು ತಿನ್ನುವ ಆಹಾರ ಧಾನ್ಯಗಳನ್ನು ಮೊದಲು ಮೊರದಲ್ಲಿ ಸುರಿದು ಧಾನ್ಯದಲ್ಲಿರುವ ಹೊಟ್ಟು ಮುಂತಾದವು ಹೋಗಲು ಮೊರದಿಂದ ಕೇರಿದ ನಂತರವೇ ಆಡುಗೆಗೆ ಉಪಯೋಗಿಸುವುದು ಈಗಲೂ ಅಲ್ಲಲ್ಲಿ ಇದೆ. ನಾವು ತಿಂದು ಅನುಭವಿಸುವ ಧಾನ್ಯವು ಕೊನೆಗೆ ಮೊರದಿಂದಲೆ ಅಡುಗೆಯ ಪಾತ್ರೆಗೆ ಹೋಗುತ್ತವೆ. ನಾವು ಬದುಕುವುದಕ್ಕೆ ಆಹಾರ ಧಾನ್ಯವು ಮೊರದಿಂದಲೆ ಬರುತ್ತಿವೆ. ಹಾಗೆಯೇ ಪ್ರಪಂಚದಲ್ಲಿ ಜೀವನ ಸಾಗಿಸಲು ಬೇಕಾಗಿರುವ ಕರ್ಮಗಳು ಕರ್ಮ ನಿಲಯ ದಿಂದಲೇ ಬರುತ್ತಿವೆ. ಒಂದು ಜೀವನ ಸಾಗಿಸಲು ಕರ್ಮಗಳನ್ನು ಒದಗಿಸುವ ಪ್ರಾರಬ್ಧನಿಲಯವನ್ನು ಬದುಕುವುದಕ್ಕೆ ಆಹಾರವನ್ನು ಒದಗಿಸುವ ಮೊರಕ್ಕೆ ಹೋಲಿಸಿ ನೀನು ಪ್ರಾರಬ್ಧ ಕರ್ಮದಲ್ಲಿ ಸೇರಿದ್ದೀಯಾ ಎಂದು ಅರ್ಥಬರುವಂತೆ ಮೊರದಲ್ಲಿ ಶಿಶುವನ್ನು ಮಲಗಿಸಿಡುತ್ತಿದ್ದರು. ಪ್ರಾರಬ್ಧಕರ್ಮದಲ್ಲಿ ಗುಣಗಳು ಎಂಬ ಪಾಶ (ಹಗ್ಗ) ದಿಂದ ಬಂಧಿಸಲ್ಪಟ್ಟಿದ್ದೀಯ ಎಂದು ತಿಳಿಯುವಂತೆ

ಹೊಕ್ಕಳ ಕರುಳನ್ನು ಕುತ್ತಿಗೆಗೆ ಸುತ್ತಿ ಅಥವಾ ಮೇಲೆ ಇಟ್ಟು ಮೊರದಲ್ಲಿ ಮಲಗಿಸಿಡುತ್ತಿದ್ದರು. ಆ ದೃಶ್ಯವನ್ನು ಅಲ್ಲಿರುವವರೆಲ್ಲ ನೋಡುವಂತೆ ಮಾಡಿ ತಿಳಿಯದವರಿಗೆ ಪದ್ಧತಿಯ ಅರ್ಥ ಹೇಳಿದ ನಂತರ ಶಿಶುವಿಗೆ ಹೊಕ್ಕಳ ಕರುಳನ್ನು ಕತ್ತರಿಸಿ ಮೊರದೊಳಗಿಂದ ಎತ್ತಿ ಪಕ್ಕದಲ್ಲಿ ಮಲಗಿಸಿಡುತ್ತಿದ್ದರು.

ಗುಣಗಳು ಎನ್ನುವ ಪಾಶವನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸಿದಾಗಲೇ ಕರ್ಮಚಯದಿಂದ ಹೊರಬಿದ್ದು ಮುಕ್ತಿ ಹೊಂದುವೆ ಎಂಬ ಅರ್ಥ ತಿಳಿಯುವಂತೆ ಶರೀರಕ್ಕೆ ಸುತ್ತಿಕೊಂಡಿರುವ ಹೊಕ್ಕಳ ಕರುಳನ್ನು ಕತ್ತಿಯಿಂದ ಕತ್ತರಿಸಿ ಮೊರದಿಂದ ಶಿಶುವನ್ನು ಹೊರಗೆ ಇಡುತ್ತಿದ್ದಾರೆ. ಮಾನವನು ಹುಟ್ಟುವುದರಲ್ಲಿಯೇ ಎಷ್ಟೋ ಜ್ಞಾನವನ್ನು ತಿಳಿಸುವ ಆಚರಣೆಗಳನ್ನು ಇಟ್ಟಿರುವ ಹಿರಿಯರಿಗೆ ಧನ್ಯವಾದಗಳನ್ನು ಹೇಳಬೇಕಾಗಿದೆ. ಮೊರವನ್ನು ಕರ್ಮಕೂಡಲಿಯಂತೆ, ಕರುಳನ್ನು ಗುಣಪಾಶವಾಗಿ ಹೋಲಿಸಿ ಜ್ಞಾನ ಖಡ್ಗದಿಂದ ಗುಣಗಳನ್ನು ಕತ್ತರಿಸಿ ಕರ್ಮದಿಂದ ಹೊರಬೀಳುವಂತೆ ಹೊಕ್ಕಳ ಕರುಳನ್ನು ಕತ್ತರಿಸಿ ಮೊರದಿಂದ ಹೊರಗಡೆ ತೆಗೆಯುವುದು ದೊಡ್ಡ ಅರ್ಥದಿಂದ ಕೂಡಿಕೊಂಡಿರುವುದು ಸಾಂಪ್ರದಾಯವಲ್ಲವೆ! ಮಾನವನ ಹುಟ್ಟಿನಲ್ಲಿಯೇ ಮೊರ ಕರ್ಮವೆಂದು, ಕರುಳು ಬಂಧವೆಂದು ತಿಳಿಸಿ ಕರುಳು ಎಂಬ ಬಂಧವನ್ನು ಕತ್ತರಿಸುವಂತೆ ಮೊರವೆಂಬ ಕರ್ಮದಿಂದ ಹೊರಬೀಳುವಂತೆಯೂ ತಿಳಿಸಿದ್ದಾರೆ.

ಈಗಲೂ ಎಲ್ಲಿಯಾದರೂ ಯಾರಾದರೂ ಕಷ್ಟಗಳನ್ನು ಅನುಭವಿಸುತ್ತಿರುವಾಗ ಅದನ್ನು ನೋಡಿ ಇದೆಲ್ಲವೂ ಮೊರದಲ್ಲಿ ಬಿದ್ದಾಗ ಬರೆದ ಬರಹವೆಂದು ಕೆಲವರು ಹೇಳುವುದನ್ನು ಕೇಳುತ್ತಿರುತ್ತೇವೆ. ಬೈಬಲ್‌ನಲ್ಲಿಯೂ ಸಹ ಯೇಸುಪ್ರಭುವು ದೊಡ್ಡವನೆಂದು ಆತನ ಕರ್ಮವನ್ನು ಆತನೇ ನಿರ್ಣಯಿಸಿಕೊಂಡಿದ್ದಾನೆಂದು ಹೇಳುವುದಕ್ಕೆ ಒಂದು ವಾಕ್ಯವನ್ನು ಉಪಯೋಗಿಸಿದ್ದಾರೆ. ಅದು **"ಆತನ ಮೊರ ಆತನ ಕೈಯಲ್ಲೇ ಇದೆ"** ಅಂದಿದ್ದಾರೆ. ಇಂದೂ ಎಂದರೆ ಜ್ಞಾನವೆಂದು ಅರ್ಥ ವಲ್ಲವೆ! ಇಂದೂಸಾಂಪ್ರದಾಯವೆಂದರೆ, ಮಾನವನು ದೇವರ ಕಡೆಗೆ ಹೋಗುವ ಮಾರ್ಗವನ್ನು ಸೂಚಿಸುವ ಅರ್ಥ

ಇರುವುದಾಗಿ ಇದೆ. ಆದ್ದರಿಂದ ಮಾನವನು ಶಿಶುವಾಗಿ ಹುಟ್ಟಿದಾಗಲೇ ಕರ್ಮಚಯವನ್ನು, ಗುಣಗಳ ಬಂಧವನ್ನು, ಅವುಗಳನ್ನು ಜಯಿಸುವ ಜ್ಞಾನವನ್ನು, ಮುಕ್ತಿ ಹೊಂದುವುದನ್ನು ತಿಳಿಸುವ ಆಚರಣೆಗೆ ಗುರುತಾದ **"ಶಿಶುವನ್ನು ಮೊರದಲ್ಲಿ ಇಡುವ ಸಾಂಪ್ರದಾಯ"** ಪೂರ್ತಿಯಾಗಿ ನಶಿಸಿಹೋಗಿದೆ ಎಂದೇ ಹೇಳಬಹುದು. ಎಷ್ಟೋ ದೊಡ್ಡ ಸಾಂಪ್ರದಾಯವು ಪೂರ್ತಿ ನಶಿಸಿಹೋಗದಂತೆ ತಕ್ಷಣ ಎಲ್ಲರೂ ಎಲ್ಲಾ ಮತದವರು ಮೊರದ ಸಾಂಪ್ರದಾಯವನ್ನು ಅನುಸರಿಸಬೇಕೆಂದು, ತಿಳಿಯದವರಿಗೆ ಮೊರದ ಸಾಂಪ್ರದಾಯವನ್ನು ಕುರಿತು ಹೇಳಬೇಕೆಂದು, ಹಾಗೆ ಮಾಡಿದಾಗಲೇ ಇಂದೂ ಸಾಂಪ್ರದಾಯಗಳನ್ನು ಸ್ವಲ್ಪ ಮಟ್ಟಿಗಾದರೂ ಆಚರಿಸಿ ರಕ್ಷಿಸಿಕೊಳ್ಳುವವರು ಆಗಿರುತ್ತೇವೆಂದು ತಿಳಿಸುತ್ತಿದ್ದೇವೆ. ಅರ್ಥವಿಲ್ಲದ ಪೂಜೆಗಳು, ವ್ಯರ್ಥವಾಗುವ ಖರ್ಚುಗಳನ್ನು ಬಿಟ್ಟು ಇಂದೂ ಸಾಂಪ್ರದಾಯಗಳ ಕಡೆಗೆ ನಿಮ್ಮ ದೃಷ್ಟಿಯನ್ನು ಮರಳಿಸಿರಿ.



# ಉಯ್ಯಾಲೆಯಲ್ಲಿ ಇಡುವುದು

ಶಿಶುವು ಜನ್ಮಿಸಿದ ನಂತರ ಮೊದಲು ಮೊರದಲ್ಲಿ ಇಟ್ಟು, ಶಿಶುವಿಗೆ ಉಸಿರು  ಬಂದ ನಂತರ ಹೊಕ್ಕಳ ಕರಳನ್ನು ಕತ್ತರಿಸಿ ಮೊರದಿಂದ ಹೊರಗಡೆ ತೆಗೆಯುವುದು ಸಾಂಪ್ರದಾಯವೆಂದು ಹೇಳಿದ್ದೇವಲ್ಲವೆ! ಹಾಗೆಯೆ ಒಂದು ಒಳ್ಳೆಯ ದಿನವನ್ನು ನೋಡಿ ಡೋಲಾರೋಹಣ ಮಾಡುವುದು ಸಹ ಸಾಂಪ್ರದಾಯವಾಗಿತ್ತು. ಡೋಲಾರೋಹಣವೆಂದರೆ ಉಯ್ಯಾಲೆಯಲ್ಲಿ ಶಿಶುವನ್ನು ಇಡುವುದು. ಹುಟ್ಟಿದ ಮಗುವನ್ನು ಉಯ್ಯಾಲೆಯಲ್ಲಿ ಮಲಗಿಸಿಡುವುದು ಸಹ ಆಚಾರವೇನಾ! ಎಂದು ಕೆಲವರು ಕೇಳಬಹುದು. ಈ ಕಾಲದಲ್ಲಿ ಮಗು ಅಳುತ್ತಿದ್ದರೆ ಸುಮ್ಮನಿರಿಸುವುದಕ್ಕೋಸ್ಕರವೋ ಅಥವಾ ಸುಖವಾಗಿ ನಿದ್ರೆ ಹೋಗುವುದಕ್ಕೊ ಮಗುವನ್ನು ಉಯ್ಯಾಲೆಯಲ್ಲಿ ಮಲಗಿಸುವುದು ನಡೆಯುತ್ತದೆ. ಮೊದಲು ಮಲಗಿಸಿಡುವುದು ಅರ್ಥದಿಂದ ಕೂಡಿಕೊಂಡಿರುವ ಕೆಲಸವಾಗಿ ಪೂರ್ವ

ದಲ್ಲಿದ್ದಿತು. ನಂತರ ಮಲಗಿಸಿಡುವುದು ಏತಕ್ಕಾದರೂ ಆಗಬಹುದು. ಮೊರದಲ್ಲಿ ಮಲಗಿಸಿಟ್ಟು, ಮೊರದಲ್ಲಿಯೆ ಹೊಕ್ಕಳು ಕತ್ತರಿಸುವುದು ಮಾನವನ ಜೀವನದಲ್ಲಿ ಸಾಂಪ್ರದಾಯದಿಂದ ಕೂಡಿಕೊಂಡ ಮೊದಲ ಘಟ್ಟವಾದರೆ, ಉಯ್ಯಾಲೆಯಲ್ಲಿ ಮೊದಲು ಮಲಗಿಸಿಡುವುದು ಎರಡನೇ ಸಾಂಪ್ರದಾಯದ ಘಟ್ಟವಾಗಿ ಭಾವಿಸುತ್ತಿದ್ದರು.

ಕರ್ಮ ಆವರಣದೊಳಗಿರುವ ವಿಷಯವನ್ನು ಮೊರ ತಿಳಿಸಿದಾಗ, ಹೊಕ್ಕಳ ಕರಳು ಗುಣಗಳ ವಿಷಯವು ತಿಳಿಸಿದಾಗ, ಕರಳಿನ ಬಂಧವನ್ನು ಕತ್ತರಿಸಿ ಹಾಕುವುದನ್ನು ಜ್ಞಾನಖಡ್ಗದಿಂದ ಗುಣಗಳನ್ನು ಜಯಿಸುವುದೆಂದು, ಕರ್ಮದಿಂದ ಮುಕ್ತಿ ಹೊಂದುವುದನ್ನು ಮೊರದಿಂದ ಹೊರಬೀಳುವುದೆಂದು ತೋರಿಸಿದ ಹಿರಿಯರು ಎರಡನೆಯ ಸಾಂಪ್ರದಾಯವಾದ ಉಯ್ಯಾಲೆಗೂ ಸಹ ಅರ್ಥ ಯಾವ ವಿಧವಾಗಿ ಹೇಳಿದ್ದಾರೋ ನೋಡೋಣ. ಮಾನವನ ಜೀವನ ಜನ್ಮದಿಂದ ಆರಂಭವಾಗಿ, ಜೀವನದ ಅಂತ್ಯವು ಮುಕ್ತಿಯಿಂದ ಮುಗಿಯುತ್ತಿದೆ. ಅಲ್ಲಿಯವರೆಗೂ ಸಾವಿನಿಂದ ಜಾಗಗಳು (ಸ್ಥಳ) ಬದಲಾಯಿಸಿದರೂ  ಜೀವನ ಎನ್ನುವುದು ವರಸೆ ಕ್ರಮವಾಗಿ ಇದ್ದೇ ಇದೆ. ಆದ್ದರಿಂದ ಒಂದು ಹುಟ್ಟಿನಿಂದ ಪ್ರಾರಂಭವಾದ ಜೀವನ ಎಷ್ಟು ಶರೀರಗಳು ಬದಲಾದರೂ ಬಿಡುವಿಲ್ಲದ್ದಾಗಿ, ಕೊನೆಗೆ ಒಂದು ಮುಕ್ತಿಯಿಂದ ಅಂತ್ಯವಾಗುತ್ತದೆ. ಜನ್ಮಕ್ಕೂ, ಮುಕ್ತಿಗೂ ಮಧ್ಯದಲ್ಲಿರುವುದೆಲ್ಲಾ ಜೀವನವೆಂದೇ ಹೇಳಬಹುದು. ಜೀವಿಯು ಹುಟ್ಟಿನಿಂದ ಆರಂಭಗೊಂಡು ಅಂತ್ಯವಾಗಿ ಹೋಗುವವರೆಗೂ ಇವರ ಜೀವನದಲ್ಲಿ ಕಷ್ಟಗಳು, ಸುಖಗಳು ಎರಡೂ ಬಂದು ಹೋಗುತ್ತಿರುತ್ತವೆ. ಕಷ್ಟಗಳು ಮಾನವನಿಗೆ ಒಂದು ವಿಧವಾದ ಅನುಭೂತಿಯನ್ನು ಉಂಟುಮಾಡಿದರೆ, ಸುಖಗಳು ಅದಕ್ಕೆ ವಿರುದ್ಧದಿಕ್ಕಿನಲ್ಲಿ ಅನುಭೂತಿಯನ್ನು ಉಂಟುಮಾಡುತ್ತವೆ. ಕಷ್ಟಸುಖಗಳು ಪೂರ್ವ ಪಶ್ಚಿಮಗಳಂತೆ ಒಂದಕ್ಕೊಂದು ವಿರುದ್ಧವಾದವೆಂದು ಎಲ್ಲರಿಗೂ ತಿಳಿದಿದೆ.  ಜೀವಿಗೆ ಮೋಕ್ಷ ಬರುವವರೆಗು ಕಷ್ಟಸುಖಗಳು ತಪ್ಪುವುದಿಲ್ಲವೆಂದು, ಇಂದಿನಿಂದ ನಿನ್ನ ಜೀವನ ಪ್ರಾರಂಭವಾಗಿದೆ ಎಂದು, ಇಂದಿನಿಂದ

ಕಷ್ಟ ಸುಖಗಳ ಮಧ್ಯ ಉಯ್ಯಾಲೆ ತೂಗಬೇಕಾಗಿರುವುದೇ ಎಂದು ಜೀವನದ ತೂಗುವ ಆಟವನ್ನು ತೂಗುಯ್ಯಾಲೆಯ ರೂಪದಲ್ಲಿ ತೋರಿಸಿದ್ದಾರೆ. ಕಷ್ಟ ಸುಖಗಳಲ್ಲಿ, ಒಳಿತು ಕೆಡುಕುಗಳಲ್ಲಿ, ಪಾಪ ಪುಣ್ಯಗಳಲ್ಲಿ ಎಂದಿಗೂ ತೂಗುತ್ತಿರಬೇಕೆನ್ನುವುದೇ ಜೀವನವೆಂದು ನೋಡುವವರಿಗೆ ಅರ್ಥವಾಗುವಂತೆ ಡೋಲಾರೋಹಣ ಇಟ್ಟಿದ್ದಾರೆ. ಉಯ್ಯಾಲೆ ಒಂದು ಪಕ್ಕಕ್ಕೆ ತೂಗಿ ಗಮ್ಯವು ಸಿಗದೆ ಮತ್ತೊಂದು ಪಕ್ಕಕ್ಕೆ ತೂಗುತ್ತಿರುತ್ತದೆ. ದಿಕ್ಕು, ವಿರುದ್ಧ ದಿಕ್ಕುಗಳಲ್ಲಿ ತೂಗುವುದು ಉಯ್ಯಾಲೆ. ಹಾಗೆಯೇ ದಶ, ವಿರುದ್ಧ ದಶಗಳಿಂದ ತೂಗಿಸುವುದು ಜೀವನ. ಜೀವಿಸುವ ಜೀವನಕಾಲವೆಲ್ಲವೂ ಈ ವಿಧವಾಗಿ ಇರುತ್ತದೆಂದು ತಿಳಿಸಲು ಮಗುವನ್ನು ಉಯ್ಯಾಲೆಯಲ್ಲಿ ಇಟ್ಟು ತೂಗಿ ತೋರಿಸುವ ಕಾರ್ಯ ಕ್ರಮವನ್ನು ಸಾಂಪ್ರದಾಯವಾಗಿ ಹಿರಿಯರು ಇಟ್ಟಿದ್ದಾರೆ. ಜ್ಞಾನದಿಂದ ಕೂಡಿಕೊಂಡಿರುವ ಅರ್ಥವನ್ನು ಕೊಡುವವುಗಳೇ ಸಾಂಪ್ರದಾಯಗಳು. ಆದ್ದರಿಂದ ಎರಡನೇ ಸಾಂಪ್ರದಾಯವಾದ ಉಯ್ಯಾಲೆ ತೂಗುವುದನ್ನು ಮಾನವರು ಅರ್ಥ ಮಾಡಿಕೊಂಡಿರುವ ಜೀವನದಲ್ಲಿ ಇರುವುದೇನೋ ತಿಳಿದುಬರುತ್ತದೆ.

ಜೀವನದಲ್ಲಿ ಕಷ್ಟಸುಖಗಳ ಮಧ್ಯೆ ತೂಗುವುದು ಹೊರತು ಏನೂ ಇಲ್ಲವೆಂದು ತಿಳಿದುಕೊಳ್ಳಲು ಎಲ್ಲರನ್ನು ಕರೆದು, ಎಲ್ಲರ ಮುಂದೆಯೂ ಶಿಶುವನ್ನು ಉಯ್ಯಾಲೆಯಲ್ಲಿ ಇಟ್ಟು ತೂಗುವುದು ನಡೆಯುತ್ತಿತ್ತು. ಈಗಲೂ ಎಲ್ಲಿಯಾದರೂ ನಾಮಮಾತ್ರವಾಗಿ ಡೋಲಾರೋಹಣ ದಿನವಿದ್ದರೂ ಅರ್ಥದಿಂದ ಕೂಡಿಕೊಂಡಿಲ್ಲ. ಹಣ ಇರುವವರು ಅವರ ದೊಡ್ಡಸ್ತಿಕೆಯನ್ನು ತೋರಿಸಿಕೊಳ್ಳುವು ದಕ್ಕಾಗಿ ಅವರ ಸಂತಾನಕ್ಕೆ ಡೋಲಾರೋಹಣೆ ಮಾಡುತ್ತಿದ್ದಾರೆಯೇ ಹೊರತು ಸಾಂಪ್ರದಾಯ ಪದ್ಧತಿಯಾಗಿ ಮಾಡುತ್ತಿಲ್ಲ. ಪೂರ್ವದಲ್ಲಿ ರಾಜರಿಂದ ಬಡವನವರೆಗೂ ಈ ಸಾಂಪ್ರದಾಯವನ್ನು ವಿಧಿಯಾಗಿ ಅರ್ಥಸಹಿತವಾಗಿ ಮಾಡುತ್ತಿದ್ದರು. ಆದ್ದರಿಂದ ಪೂರ್ವಕಾಲದಲ್ಲಿ ಎಲ್ಲರೂ ಆಧ್ಯಾತ್ಮಿಕ ಚಿಂತನೆಯನ್ನು ಹೊಂದಿರುತ್ತಿದ್ದರು. ಈ ದಿನ ಸಂಪ್ರದಾಯಗಳು ತಿಳಿದಿಲ್ಲ ವಾದ್ದರಿಂದ ಆಧ್ಯಾತ್ಮಿಕ

ಚಿಂತನೆಯಾಗಲಿ, ಪಾಪ ಪುಣ್ಯ ಭೀತಿಯಾಗಲಿ ಪ್ರಜೆಗಳಲ್ಲಿ ಇಲ್ಲದಾಗಿದೆ. ಹೊಸ ಹೊಸ ಗುಡಿಗೋಪುರಗಳು ಬೆಳೆದುಹೋಗುತ್ತಿದ್ದರೂ ಎಷ್ಟೋ ಜನ ಸ್ವಾಮೀಜಿಗಳು ಹುಟ್ಟಿ ಬರುತ್ತಿದ್ದರೂ, ವಾಸ್ತವಕ್ಕೆ ಮಾನವನಿಗೆ ಬೇಕಾಗಿರುವ ದೈವಜ್ಞಾನ ಸಿಗುತ್ತಿಲ್ಲ. ಅನೇಕವಾಗಿರುವ ದೈವಜ್ಞಾನ ಯುಕ್ತ ಸಾಂಪ್ರದಾಯಗಳು ನಶಿಸಿ ಹೋಗುತ್ತಿವೆ. ಎಷ್ಟೋ ಜನ ಸ್ವಾಮೀಜಿಗಳು ಮಾನವನಿಂದ ಉಪನ್ಯಾಸಗಳಲ್ಲಿ ದೊಡ್ಡವರೆನಿಸಿಕೊಳ್ಳುತ್ತಿದ್ದರೂ ಪೂರ್ವಕಾಲದ ಜ್ಞಾನವನ್ನು ಮಾತ್ರ ಹೇಳಲಾಗದೆ ಹೋಗುತ್ತಿದ್ದಾರೆ. ನೂರು, ಇನ್ನೂರು ವರ್ಷಗಳ ಕೆಳಗೆ ಹುಟ್ಟಿದವರು ಸಹ ದೇವತೆಗಳಾಗಿ ತಯಾರಾಗುತ್ತಿರಲು, ಯೋಗಗಳಲ್ಲಿ ಎಷ್ಟೋ ಹೆಸರುಗಳನ್ನು ಇಡಲಾದ ಹೊಸ ವಿಧಾನಗಳೆಷ್ಟೋ ಬರುತ್ತಿರಲು, ಮಾನವನು ಯಾವ ಕಡೆಗೆ ಹೋಗಬೇಕೆಂಬುವುದು ಅರ್ಥವಾಗ ದಂತೆ ಹೋಗುತ್ತಿದೆ. ಈ ನೇತೃತ್ವದಲ್ಲಿ ಪೂರ್ವಕಾಲದ ಜ್ಞಾನವನ್ನು, ಪೂರ್ವಕಾಲದ ಹಿರಿಯರು ತಿಳಿಸಿದ ಸಾಂಪ್ರದಾಯಗಳನ್ನು ಮಾನವನು ಮರೆತು ಹೋಗಿದ್ದಾನೆ. ಈಗಿನಿಂದ ನಾವು ಹೊಸ ದೇವತೆಗಳನ್ನು ಹೊಸ ಯೋಗಾ ಭ್ಯಾಸಗಳನ್ನು ಬಿಟ್ಟು ಅಸಲಾದ ದೈವಜ್ಞಾನವನ್ನು ತಿಳಿದುಕೊಳ್ಳಲು ಪ್ರಯತ್ನ ಮಾಡೋಣ.



# ಉಪನಯನ

ನಯನವೆಂದರೆ ಕಣ್ಣು ಎಂದು ಅರ್ಥ. ಮಾನವನಿಗೆ ಎರಡು ಕಣ್ಣುಗಳಿವೆ. ಎರಡನ್ನೂ ನಯನಗಳೆಂದು ಅನ್ನುತ್ತೇವೆ ಆದರೆ ಒಂದನ್ನಾದರೂ ಸಹ ಉಪನಯನ ಅನ್ನುವುದಿಲ್ಲ. ಉಪನಯನ ಎನ್ನುವುದು ಸಹ ದೃಷ್ಠಿಯಿರುವ ಕಣ್ಣೇ ಆಗಲಿ ಮುಖಕ್ಕಿರುವ ಎರಡು ಕಣ್ಣುಗಳಂತಹದಲ್ಲ. ಉಪ ಎಂದರೆ ಮತ್ತೊಂದೆಂದು ಅರ್ಥ ಮಾಡಿಕೊಳ್ಳಬೇಕಾಗಿದೆ. ಎರಡು ಕಣ್ಣುಗಳಿಂದ ನೋಡುವ ವಿಷಯಗಳೆಲ್ಲ ಪ್ರಪಂಚದ ವಿಷಯಗಳೆ, ಎರಡು ಕಣ್ಣುಗಳಿಂದ ನೋಡಿದ ವಿಷಯಗಳನ್ನೇ ಮನಸ್ಸು ಜ್ಞಾಪಕ ಇಟ್ಟುಕೊಂಡು ಮತ್ತೆ ಅವುಗಳನ್ನು

ತೋರಿಸುತ್ತಿರುತ್ತದೆ. ನಿನ್ನೆಯದಿನ ಒಂದು ಸಿನಿಮಾ ನೋಡಿದ್ದೇವೆಂದುಕೊಳ್ಳೋಣ. ಆ ಸಿನಿಮಾದಲ್ಲಿ ಕಣ್ಣುಗಳ ಮೂಲಕ ನೋಡಿದ ದೃಶ್ಯಗಳು ಕೆಲವು ಮನಸ್ಸಿಗೆ ಅತ್ತಿಕೊಂಡಿರುತ್ತವೆ. ಎರಡನೇ ದಿನ ಮನೆಯಲ್ಲಿ ಕುಳಿತುಕೊಂಡು ಇದ್ದರೂ ಸಿನಿಮಾ ಜ್ಞಾಪಕ ಬಂದ ತಕ್ಷಣ ನೋಡಿದ ದೃಶ್ಯಗಳು ಕಾಣಿಸಿದಂತೇ ತಿಳಿಯುತ್ತಿರುತ್ತದೆ. ಈ ವಿಧವಾಗಿ ಎರಡು ಕಣ್ಣುಗಳ ಮೂಲಕ ನೋಡಿದ ವಿಷಯಗಳು ಮನೋಜ್ಞಾಪಕದ ಮೂಲಕ ಮತ್ತೆ ನೋಡುವುದು ಸಹ ನಡೆಯುತ್ತಿದೆ. ಹಾಗೆ ನೋಡಿದ ವಿಷಯವಾಗಲಿ, ಕೇಳಿದ ವಿಷಯವಾಗಲಿ, ತಿಂದ ಪದಾರ್ಥದ ರುಚಿಯಾಗಲಿ, ಮತ್ತೆ ಮನೋನೇತ್ರದ ಮೂಲಕ ನೋಡಲ್ಪಡುತ್ತಿದೆ. ಹಾಗೆ ಮನೋನೇತ್ರದಿಂದ ನೋಡುವುದನ್ನು ಮೂರನೇ ಕಣ್ಣಿನಿಂದ ನೋಡುವುದೆಂದು ಎನ್ನುತ್ತಾರೆ. ಒಂದು ವಿಷಯವನ್ನು ನೋಡಿದಂತೆ ಜ್ಞಾಪಕ ಬರುವುದನ್ನು ಮನೋ ದೃಷ್ಟಿಯಿಂದ ನೋಡಿದಂತೆ ಹೇಳಿಕೊಳ್ಳುತ್ತಾರೆ. ಹಾಗೆ ಕಣ್ಣುಗಳು ಇಲ್ಲದೆ ಮೊದಲು ನೋಡಿದ ಸಿನಿಮಾ ದೃಶ್ಯವನ್ನು ನೋಡುವುದನ್ನು ಮೂರನೆಯ ಕಣ್ಣಿನಿಂದ ನೋಡಿದಂತೆ, ಮನೋನೇತ್ರದಿಂದ ನೋಡಿದಂತೆ ಹೇಳುತ್ತಾ, ಅದನ್ನೇ ಸೂಕ್ಷ್ಮ ದೃಷ್ಟಿ ಎಂದು ಕೆಲವರು ಅನ್ನುತ್ತಿರುತ್ತಾರೆ.

ಕೆಲವರು ಹೇಳಿದಂತೆ ಕಣ್ಣುಗಳಿಂದ ನೋಡಿದ ದೃಶ್ಯವನ್ನು ಮನೋ ನೇತ್ರದಿಂದ ನೋಡುವುದು ಉಪನಯನದಿಂದ ನೋಡಿದಂತಲ್ಲ. ಸ್ಥೂಲ ಕಣ್ಣುಗಳಿಂದ ನೋಡಿದ ವಿಷಯವನ್ನು ತಿರುಗಿ ಮನಸ್ಸಿನಿಂದ ನೋಡಿದರು ಅದು ಉಪನಯನದ ನೋಟವಲ್ಲ. ಮನಸ್ಸು ಉಪನಯನವೆಂಬ ನೇತ್ರವಲ್ಲ. ಮನಸ್ಸಿನ ಮೂಲಕ ತೋರಿಸಲ್ಪಡುವ ವಿಷಯಗಳು ಮೊದಲು ಕಣ್ಣುಗಳು ತೋರಿಸಿದವುಗಳೇ ಆದ್ದರಿಂದ ಅವು ಕಣ್ಣುಗಳ ದೃಷ್ಟಿಗೆ ಸಂಬಂಧಿಸಿದ ವಿಷಯಗಳೆ ಆಗುತ್ತವೆ. ಮನೋನೇತ್ರದ ಮೂಲಕ ನೋಡುತ್ತಾ ಕಣ್ಣುಗಳಿಂದ ನೋಡದಿದ್ದಾಗ ಆ ವಿಷಯ ಕಣ್ಣುಗಳಿಂದ ನೋಡಿದಂತೇ ಲೆಕ್ಕಹಾಕಲ್ಪಡುತ್ತಿದೆ. ಮನೋನೇತ್ರಕ್ಕೆ ಸ್ವಂತವಾದ ನೋಟವಿಲ್ಲ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳಿಗಿರುವ

ಇಂದ್ರಿಯ ಶಕ್ತಿಗಳ ಮೂಲಕ ಮನಃ ಮನಸ್ಸು ತೋರಿಸುತ್ತಿದೆಯಾಗಲಿ ವಾಸ್ತವವಾಗಿ ಮನಸ್ಸಿಗೆ ತೋರಿಸುವ ಶಕ್ತಿ ಇಲ್ಲ. ಒಂದು ವೇಳೆ ಸ್ಥೂಲ ಕಣ್ಣುಗಳು ನೋಟ ಇಲ್ಲದಿರುವುವಾದರೆ, ಯಾವ ದೃಶ್ಯವನ್ನು ನೋಡದಿರುವು ವಾದರೆ ಮನಸ್ಸು ಸಹ ದೃಷ್ಠಿ ಇಲ್ಲದಿರುವುದೇ ಆಗುತ್ತದೆ. ಹಾಗೆಯೇ ಎಲ್ಲ ಅವಯವಗಳ ಕಡೆಗೂ ಮನಸ್ಸು ಇರುವುದೆಂದು ತಿಳಿಯಬೇಕು. ಇದರಿಂದ ಮನಸ್ಸು ಇಂದ್ರಿಯ ವಿಷಯಗಳನ್ನು ಹೊರತು ಇತರ ವಿಷಯಗಳನ್ನು ತೋರಿ ಸುವುದಿಲ್ಲವೆಂದು, ಹಾಗೆ ತೋರಿಸಲು ಅದಕ್ಕೆ ಸ್ವಂತವಾಗಿ ದೃಷ್ಠಿ ಇಲ್ಲವೆಂದು ತಿಳಿಯಬೇಕು.

ಮನೋ ದೃಷ್ಟಿ ಇಂದ್ರಿಯ ದೃಷ್ಟಿಯಂತಹುದೆ ಎಂದು ಹೇಳುವುದರಿಂದ, ಮನಸ್ಸಿಗೆ ಸ್ವಂತ ಕಣ್ಣು ಇಲ್ಲದಿರುವುದರಿಂದ ಮನೋದೃಷ್ಟಿಯನ್ನು ಮೂರನೇ ದೃಷ್ಟಿಯೆಂದು ಹೇಳಬಹುದಾಗಲಿ, ಮನೋ ನೇತ್ರವನ್ನು ಉಪನಯನವೆಂದು ಅನ್ನುವುದಕ್ಕೆ ಸಾಧ್ಯವಿಲ್ಲ. ಮನೋ ದೃಷ್ಟಿಯು ದೊಡ್ಡವರಿಗಿಂತಲೂ ಚಿಕ್ಕ ಮಕ್ಕಳಿಗೆ ಹೆಚ್ಚಾಗಿರುತ್ತದೆ. ಉದಾಹರಣೆಗೆ ಒಂದು ಕುಟುಂಬದವರೆಲ್ಲ ಒಟ್ಟಾಗಿ ಒಂದು ಸಿನಿಮಾ ನೋಡಿದ್ದಾರೆಂದುಕೊಳ್ಳೋಣ, ಸಿನಿಮಾದಲ್ಲಿ ಸಣ್ಣ ದೃಶ್ಯದಿಂದ ಪ್ರಾರಂಭಿಸಿ ಎಲ್ಲಾ ದೃಶ್ಯಗಳು ಚಿಕ್ಕ ಮಕ್ಕಳಿಗೆ ಚೆನ್ನಾಗಿ ಜ್ಞಾಪಕ ಬರುತ್ತವೆ. ಅವರಿಗೆ ಬಂದ ಹಾಗೆ ದೊಡ್ಡವರಿಗೆ ಜ್ಞಾಪಕ ಬರುವುದಿಲ್ಲ. ಅದೇ ಹಿರಿಯರಿಗೆ, ಚಿಕ್ಕವರಿಗೆ ಇರುವ ಮನೋ ದೃಷ್ಟಿಯ ಒಂದು ವ್ಯತ್ಯಾಸವೆಂದು ಹೇಳಬಹುದು. ಮನೋ ದೃಷ್ಟಿಯು ಮಕ್ಕಳಿಗೆ ಬಾಲ್ಯದಿಂದಲೆ ಇರುತ್ತದೆ. ಆದ್ದರಿಂದ ಅವರಿಗೆ ಮನೋದೃಷ್ಟಿಯನ್ನು ಮತ್ತೊಬ್ಬರು ಕಲ್ಪಿಸುವ ಅವಶ್ಯಕತೆ ಇಲ್ಲ. ಉಪನಯನ ಬೇರೆ, ಮನೋನೇತ್ರ ಬೇರೆ. ಆದ್ದರಿಂದ ಉಪನಯನ ಎಲ್ಲರಿಗೂ ಅವಶ್ಯ. ಮನೋನೇತ್ರವನ್ನು ಮೊದಲಿಂದಲೂ ಹೊಂದಿದ್ದೇವೆ, ಆದ್ದರಿಂದ ಅದು ಯಾರಿಗೂ ಅವಶ್ಯವಿಲ್ಲ.

ಮನೋನೇತ್ರ ಇರುವುದೆ ಆದ್ದರಿಂದ ಅದೇನೋ ಅದರ ಸಾಮರ್ಥ್ಯ ವೇನೊ ಅರ್ಥವಾಗಿದೆ. ಉಪನಯನ ಎಂದರೇನು? ಅದರ ಸಾಮರ್ಥ್ಯ

ವೇನೆಂಬುವುದು ಎಲ್ಲರಿಗೂ ಪ್ರಶ್ನೆಯಾಗಿಯೇ ಉಳಿದಿದೆ. ಆದ್ದರಿಂದ ಉಪನಯನ ಎಂದರೆ ಏನೋ ತಿಳಿದುಕೊಳ್ಳೋಣ. ಉಪನಯನ ಸ್ಥೂಲವಾದ ಎರಡು ಕಣ್ಣುಗಳಿಗಾಗಲಿ, ಮೂರನೇ ಕಣ್ಣಾದ ಮನೋನೇತ್ರಕ್ಕಾಗಲಿ ಸಂಬಂಧವಿಲ್ಲ. ಒಂದು ಎರಡು ಕಣ್ಣುಗಳ ಮೂಲಕ ಸ್ಥೂಲವಾಗಿರುವ ದೃಶ್ಯಗಳನ್ನು, ಮೂರನೇ ಕಣ್ಣಿನ ಮೂಲಕ ಸೂಕ್ಷ್ಮವಾಗಿ ಅಡಗಿರುವ ಸ್ಥೂಲ ದೃಶ್ಯಗಳನ್ನು ನೋಡಬಹುದು. ಉಪನಯನವು ಪ್ರಪಂಚದ ಇಂದ್ರಿಯಗಳಿಗೆ ಸಂಬಂಧವಿಲ್ಲದ ವಿಷಯಗಳನ್ನು ತೋರಿಸುವುದು. ಐದು ಜ್ಞಾನೇಂದ್ರಿಯಗಳಿಗೆ ಸಂಬಂಧಹೊಂದಿದ ಶಬ್ದ, ರೂಪ, ರಸ, ಗಂಧ, ಸ್ಪರ್ಶಗಳ ವಿಷಯಗಳನ್ನು ತೋರಿಸುವುದಲ್ಲ. ಉಪನಯನವು ನಾವು ನಿವಾಸಿಸುತ್ತಿರುವ ದೇಶವನ್ನು ತಿಳಿಸುವುದಲ್ಲ. ದೇಶವಲ್ಲದ ದೇಶವಾದ ಉಪದೇಶವನ್ನು ತೋರಿಸುವುದು ಉಪನಯನ. ಉಪನಯನದ ಮೂಲಕ ಉಪದೇಶವಾದ ಆತ್ಮಸ್ಥಳ ತಿಳಿಯುತ್ತದೆ. ಉಪನಯನದ ಮೂಲಕ ಆತ್ಮವನ್ನು ಅಧ್ಯಯನ ಮಾಡುವ ನೋಟ ಏರ್ಪಡುತ್ತದೆ. ಉಪನಯನವೊಂದರ ದೃಷ್ಠಿ ಆತ್ಮವನ್ನು ತೋರಿಸುವುದು, ಅದನ್ನೇ ಆತ್ಮಜ್ಞಾನ ದೃಷ್ಟಿ ಎನ್ನುತ್ತಾರೆ. ಆತ್ಮದೃಷ್ಟಿ ಯಾದ ಉಪನಯನವು ಗುರುಗಳಿಂದಲೇ ಪಡೆದುಕೊಳ್ಳಬೇಕು. ಸಂಪೂರ್ಣ ಜ್ಞಾನಿಗಳಾದವರತ್ತಿರ ಒಂದು ಶುಭ ಕಾಲದಲ್ಲಿ ಜ್ಞಾನದೃಷ್ಟಿಯನ್ನು ಪಡೆದುಕೊಳ್ಳುವು ದನ್ನು ಉಪನಯನ ಮಾಡಿಸಿಕೊಳ್ಳುವುದೆಂದು ಅನ್ನುತ್ತಾರೆ. ಮನುಷ್ಯನಿಗೆ ಸ್ವಲ್ಪ ವಯಸ್ಸು ಬಂದಕೂಡಲೆ ಉಪನಯನ ಮಾಡುವುದು ಇಂದೂ ಸಾಂಪ್ರದಾಯಗಳಲ್ಲಿ ಮೂರನೇ ಸಾಂಪ್ರದಾಯವಾಗಿದೆ. ಮನುಷ್ಯನಿಗೆ 12 ವರ್ಷ ತುಂಬಿದ ನಂತರ ಬುದ್ಧಿಗೆ ಸ್ವಲ್ಪ ಬಲ ಬಂದಿರುತ್ತದೆ. ಆದ್ದರಿಂದ 12 ವರ್ಷಗಳ ನಂತರ ಯಾವಾಗಲಾದರೂ ಉಪನಯನ ಮಾಡಿಸಬಹುದು. ಮೊಟ್ಟಮೊದಲು ಆತ್ಮಜ್ಞಾನ ಬೋಧನೆಯನ್ನು ಗುರುಸಮ್ಮುಖದಲ್ಲಿ ಬೋಧಿ ಸುವುದರಿಂದ ಆ ಸಮಯದಿಂದ ಉಪನಯನ ಉಂಟಾಗುತ್ತದೆಂದು ಹಿರಿಯರು ಹೇಳಿದ್ದಾರೆ. ನಂತರ ಆಗಾಗ ಆತ್ಮಬೋಧನೆ ತಿಳಿದುಕೊಳ್ಳುವುದರಿಂದ ಉಪನಯ ನಕ್ಕೆ ಸ್ವಲ್ಪ ಸ್ವಲ್ಪ ದೃಷ್ಟಿ ಕಲ್ಪಿಸಿಕೊಂಡಂತಾಗುತ್ತದೆ. ನಯನಕ್ಕೆ ನೋಟ ಏರ್ಪಟ್ಟ

ನಂತರ ನೋಡಬೇಕಾಗಿರುವುದು ಉಪದೇಶವನ್ನು. ಆದ್ದರಿಂದ ಸ್ವಲ್ಪ ಜ್ಞಾನ ತಿಳಿದ ವ್ಯಕ್ತಿಗೆ ಉಪದೇಶ ಅವಶ್ಯಕ. ದೃಶ್ಯಕ್ಕಿಂತ ಮೊದಲು ಕಣ್ಣು ಅವಶ್ಯ. ಆದ್ದರಿಂದ ಉಪದೇಶಕ್ಕಿಂತ ಮೊದಲು ಉಪನಯನ ಅವಶ್ಯಕ. ಜ್ಞಾನಬೋಧನೆ ಯಿಂದ ಉಪನಯನವನ್ನು ಮೊದಲು ಹೊಂದಬೇಕು.

ಮನುಷ್ಯನಿಗೆ 12 ವರ್ಷಗಳ ವಯಸ್ಸು ಬಂದನಂತರ ಪೂರ್ವದಲ್ಲಿ ಇಂದೂ ಸಾಂಪ್ರದಾಯದ ಪ್ರಕಾರ ಒಂದು ಶುಭ ಮುಹೂರ್ತದಲ್ಲಿ ಸೋಮವಾರ ದಿನದಂದು ಉಪನಯನ ಮಾಡಲು ಏರ್ಪಾಟು ಮಾಡಿಕೊಳ್ಳುತ್ತಿದ್ದರು. ನಿರ್ಣಯಿಸಿಕೊಂಡ ದಿನದಂದು ಬಂಧುಮಿತ್ರರಿಗೆಲ್ಲ ಆಹ್ವಾನ ಕಳುಹಿಸಿ ಬರಮಾಡಿ ಕೊಂಡು, ಒಬ್ಬ ಗುರುವಿನಿಂದ ಮೊಟ್ಟ ಮೊದಲನೆಯದಾಗಿ ಆತ್ಮಜ್ಞಾನ ಬೋಧನೆ ಮಾಡಿಸುತ್ತಾರೆ. ಹಾಗೆ ಮೊದಲು ಆತ್ಮಜ್ಞಾನ ಬೋಧನೆಯಿಂದ ಆ ಬಾಲಕನಿಗೆ ಉಪನಯನ ಏರ್ಪಟ್ಟಂತೆ ತಿಳಿಯುತ್ತಿದ್ದರು. ಅದು ಅಂದಿನ ಪೂರ್ವದ ಉಪನಯನ ಸಾಂಪ್ರದಾಯವಾಗಿದ್ದು, ಅದರ ರೂಪ ಈದಿನ ಬೇರೆ ವಿಧವಾಗಿ ಬದಲಾಗಿದೆ. ಕೆಲವರು ಜನಿವಾರ ಹಾಕಿ, ಮಂತ್ರಹೇಳಿ ಉಪನಯನ ಮಾಡಿದ್ದೇವೆ ಅನ್ನುತ್ತಿದ್ದಾರೆ. ಕಾಲಕ್ರಮವಾಗಿ ಧರ್ಮ ಅಧರ್ಮವಾಗಿ ಬದಲಾಗಿ ಹೋದಂತೆ ಸಾಂಪ್ರದಾಯವು ಸಹ ಬದಲಾಗಿದೆ. ಕೆಲವರಾದರೆ ಚಿಕ್ಕ ವಯಸ್ಸಿನಲ್ಲಿಯೇ ಜ್ಞಾನವಾ ಎಂದು ಸಾಂಪ್ರದಾಯವನ್ನೇ ಮರೆತುಹೋಗಿದ್ದಾರೆ. ಪ್ರಪಂಚ ಓದುಗಳು ಹೊರತು ಪರಮಾತ್ಮ ಓದುಗಳೇನೋ ತಿಳಿಯದ ಸ್ಥಿತಿಯಲ್ಲಿ ಕೆಲವರು ತಮ್ಮ ಮಕ್ಕಳನ್ನು ಬೆಳೆಸುತ್ತಿದ್ದಾರೆ. 50 ವರ್ಷಗಳು ತುಂಬಿದ ನಂತರವಾದರೂ ಅವರಿಗೆ ಜ್ಞಾನವನ್ನು ಕುರಿತು ಗುರುತುಮಾಡಿದರೆ ಈಗಲೆ ಏಕೆ ಪೂರ್ತಿ ಮುದುಕನಾದ ನಂತರ ಆಗ ನೋಡೋಣ ಎನ್ನುವವರೂ ಇದ್ದಾರೆ. ಎಷ್ಟು ವಯಸ್ಸು ಬಂದರೂ ಪ್ರಪಂಚ ಸಂಬಂಧ ಅಲ್ಲದಂತಹ ಉಪನಯನವನ್ನು ತಿಳಿಯದೆ ಅಜ್ಞಾನ ಅಂದಕಾರದಲ್ಲಿ ಮುಳುಗಿಹೋಗುತ್ತಿದ್ದಾರೆ. ಕುರುಡುತನಹೋಗಿ ಜ್ಞಾನದೃಷ್ಟಿ ಉಂಟಾಗಬೇಕೆಂದರೆ ಮೊದಲು ಉಪನಯನವೆಂಬ ಕಣ್ಣು ಅಗತ್ಯ. ನಂತರ ಶ್ರದ್ಧೆಯನ್ನನುಸರಿಸಿ ನೋಟವನ್ನು ಮೆರಗುಗೊಳಿಸಿಕೊಳ್ಳಬಹುದು.

ಇಂದೂ ಸಾಂಪ್ರದಾಯಗಳಲ್ಲಿ ಮುಖ್ಯವಾದುದು ಉಪನಯನ ಕಾರ್ಯ ಕ್ರಮ. ಪೂರ್ವವು ಉಪನಯನ ಮಾಡದೆ ತಮ್ಮ ಮಕ್ಕಳಿಗೆ ವಿವಾಹ ಮಾಡುತ್ತಿರಲಿಲ್ಲ. ಆ ಪದ್ಧತಿ ಬ್ರಾಹ್ಮಣ, ವೈಶ್ಯ ಮೊದಲಾದ ಕುಲಗಳಲ್ಲಿ ಈಗಲೂ ಇದ್ದರೂ ಸ್ವಲ್ಪ ಸಾಂಪ್ರದಾಯದಬದ್ಧವಾಗಿ ಇಲ್ಲವೆಂದೇ ಹೇಳಬಹುದು. ಉಪನಯನಕ್ಕೆ ಮೂಲವಾದುದು ಆತ್ಮಜ್ಞಾನವೇ ಆದುದರಿಂದ ಆತ್ಮಜ್ಞಾನ ತಿಳಿಸದೆ ಮಂತ್ರ ಹೇಳಿದರೂ, ಜನಿವಾರ ಹಾಕಿದರೂ ಆ ಕಾರ್ಯ ಉಪನಯನವೆನಿಸಿ ಕೊಳ್ಳುವುದಿಲ್ಲ. ಉಪನಯನ ಮಾಡಿಸುವುದು ಇಂದೂಗಳಿಗೆ ಮುಖ್ಯವಾದ ಆಚಾರ. ಇಂದೂಗಳಾಗಿರುವವರು ಎಲ್ಲರೂ ಸಾಂಪ್ರದಾಯ ಬದ್ಧವಾದ ಉಪನಯನವನ್ನು ಸ್ವಲ್ಪ ಬುದ್ಧಿಗ್ರಾಹಿತ ಶಕ್ತಿ ಬೆಳೆದ ತಮ್ಮ ಮಕ್ಕಳಿಗೆ ಮಾಡಿಸಲೇ ಬೇಕು. ದೇವರ ಜ್ಞಾನವನ್ನು ಮಕ್ಕಳಿಗೆ ಬೋಧಿಸುವುದರಲ್ಲಿ ಕ್ರೈಸ್ತ, ಇಸ್ಲಾಂ ಮತದವರೆ ಮುಂದಿರುವಂತೆ ಕಾಣಿಸುತ್ತಿದೆ. ದೇವರ ಜ್ಞಾನದಲ್ಲಿ ಎಲ್ಲರಿಗಿಂತಲೂ ಹಿಂದುಳಿದವರು ಹಿಂದುಗಳೇ ಎಂದು ತಿಳಿಯುತ್ತಿದೆ. ಹಿಂದುಗಳಲ್ಲಿ ದೊಡ್ಡವರೂ ಸಹ ಜ್ಞಾನಕ್ಕೆ ದೂರವಾಗಿದ್ದು ತಮ್ಮ ಮಕ್ಕಳನ್ನು ಸಹ ದೂರವಾಗಿ ಇಟ್ಟಿದ್ದಾರೆ. ದೇವಾಲಯಗಳಿಗೆ ಹೋಗಿ ಕೋರಿಕೆಗಳು ಕೋರುವ ಭಕ್ತಿ ಹೊರತು ಜ್ಞಾನ ಉಂಟಾಗುವ ಆಚರಣೆ ಒಂದೂ ಸಹ ಇಲ್ಲದಂತೆಹೋಗಿದೆ. ವಾಸ್ತವವನ್ನು ಹೇಳುತ್ತಿದ್ದೇನೆಂದು ದುಃಖ ಪಡದೆ ಈಗಲಾದರೂ ಸ್ವಲ್ಪ ಕಾಲ ಇದ್ದು ಹೋಗುವ ಜೀವನದ ಮೇಲೆ ದೃಷ್ಟಿ ಇಡದೆ ಅಷ್ಟೋ ಇಷ್ಟೋ ದೈವ ಜ್ಞಾನದ ಮೇಲೆ ದೃಷ್ಟಿ ಇಡಬೇಕೆಂದು ಕೋರುತ್ತಿದ್ದೇವೆ. ಇಂದೂ ಸಾಂಪ್ರದಾಯ ಗಳು ದೈವ ಸಾರಾಂಶ ಹೊಂದಿರುವವೆಂದು ಉಳಿದವರೂ ಸಹ ತಿಳಿಯುವಂತೆ ಆಚರಿಸಬೇಕು. ಸಾರವಿಲ್ಲದ ಆಹಾರ, ದೈವ ಜ್ಞಾನವಿಲ್ಲದ ಜೀವನ ನಿರರ್ಥ ಕವೆನ್ನುವ ಹಿರಿಯರ ವಾಕ್ಯವನ್ನು ಜ್ಞಾಪಕ ಇಟ್ಟುಕೊಂಡು ಜ್ಞಾನ ಹೊಂದಿದ ಜೀವನವನ್ನು ಸಾಗಿಸಬೇಕು.



# ಉಪದೇಶ

ಮಾನವನ ಜೀವನದಲ್ಲಿ ಅತ್ಯಂತ ಶ್ರೇಷ್ಠವಾದ ಸಾಂಪ್ರದಾಯ ಎಂದರೆ ಉಪದೇಶ ಹೊಂದುವುದು. ಇಂದೂ ಸಂಪ್ರದಾಯಗಳಲ್ಲಿ ನಾಲ್ಕನೆಯದಾದ ಉಪದೇಶ ತಪ್ಪದಂತೆ ಉಪನಯನ ಹೊಂದಿದವರೆ ಹೊಂದಬೇಕಾಗಿದೆ. ಕಣ್ಣಿಲ್ಲದೆ ನೋಟ ಇಲ್ಲದಹಾಗೆ ಉಪನಯನವಿಲ್ಲದೇ ಉಪದೇಶ ಇರುವುದಿಲ್ಲ. ಉಪದೇಶ ವೆಂದರೆ ನಮಗೆ ಪಕ್ಕದಲ್ಲಿರುವ ದೇಶವೆಂದೂ, ಇಲ್ಲಿಯವರೆಗೂ ನಾವು ನೋಡದ ಕಾಣಿಸದ ಪ್ರದೇಶವೆಂದು ಅರ್ಥ. ಉಪದೇಶ ನೋಡುವುದಕ್ಕು ಹೊಂದುವುದಕ್ಕು ತಪ್ಪದೆ ಅದನ್ನು ನೋಡುವಂತಹ ಕಣ್ಣು ಬೇಕಾಗಿದೆ. ಆ ಕಣ್ಣನ್ನೇ ಉಪನಯನ ಎನ್ನುತ್ತೇವೆ. ಉಪನಯನ ಸ್ವಲ್ಪ ಯುಕ್ತವಯಸ್ಸು ಬಂದ ನಂತರ ಹೊಂದಿ, ಕ್ರಮೇಣ ದೃಷ್ಟಿಯನ್ನು ಅಭಿವೃದ್ಧಿ ಮಾಡಿಕೊಂಡು ಒಂದು ಭಾರಿ ಗುರುವಿನ ಮೂಲಕ ಉಪದೇಶವನ್ನು ನೋಡ (ಹೊಂದ) ಬೇಕಾಗಿರುತ್ತದೆ. ಈ ಕಾಲದಲ್ಲಿ ಉಪನಯನವೇ ತಿಳಿಯದಂತಾಗಿದೆ, ಆದ್ದರಿಂದ ಉಪದೇಶ ಏನೊ ತಿಳಿಯುತ್ತಿಲ್ಲ. ಕೆಲವರು ನಾವು ನಮ್ಮ ಗುರುಗಳ ಬಳಿ ಉಪದೇಶ ಹೊಂದಿದ್ದೇವೆಂದು ಹೇಳಬಹುದು. ಕೆಲವರು ಶಿಷ್ಯರು ನಮ್ಮ ಗುರುಗಳ ಬಳಿಯಿಂದ ಉಪದೇಶವನ್ನು ತೆಗೆದುಕೊಂಡು ಬಂದಿದ್ದೇವೆಂದು ಸಹ ಹೇಳಬಹುದು. ಶಿಷ್ಯರೆನ್ನುವವರು ಈ ವಿಧವಾಗಿ ಹೇಳುತ್ತಿರುವಾಗ ಗುರುಗಳೆನ್ನುವವರು ಯಾರು ಬಂದರು, ಯಾವಾಗ ಬಂದರೂ ಉಪದೇಶ ಕೊಡುವುದಕ್ಕೆ ತಯಾರಾಗಿರುತ್ತಾರೆ. ಈ ಪದ್ಧತಿಗಳನ್ನೆಲ್ಲಾ ನೋಡುತ್ತಿದ್ದರೆ ಇಂದೂ ಸಾಂಪ್ರದಾಯಗಳು ಎಷ್ಟು ಕ್ಷೀಣಸ್ಥಿತಿಗೆ ಸೇರಿಹೋಗಿವೆಯೊ ಅರ್ಥವಾಗುತ್ತಿದೆ.

ಪೂರ್ವದ ಆಚಾರದ ಪ್ರಕಾರ ಉಪನಯನದಂತೆಯೇ ಉಪದೇಶವನ್ನು ಸಹ ಮದುವೆಯಾಗುವ ಮುನ್ನವೇ ಹೊಂದಬೇಕಾಗಿದೆ. ಉಪನಯನವಿಲ್ಲ ದವನಿಗೆ ವಿವಾಹವಾಗಲು ಹುಡುಗಿಯನ್ನು ಕೊಡುತ್ತಿರಲಿಲ್ಲ. ಈ ಕಾಲದಲ್ಲಿ ಮಹಮ್ಮದೀಯ ಮತದಲ್ಲಿ ಖುರಾನ್ ಓದದ ಹೆಣ್ಣು ಹುಡುಗಿಯನ್ನು ನಿಖಾ ಮಾಡಿಕೊಳ್ಳದಂತೆ ಪೂರ್ವದಲ್ಲಿ ಉಪನಯನ ಉಪದೇಶ ಹೊಂದದವನಿಗೆ

ತಮ್ಮ ಹೆಣ್ಣು ಮಗಳನ್ನು ಕೊಡುವವರು ಇರಲಿಲ್ಲ. ಆದ್ದರಿಂದ ಯುಕ್ತವಯಸ್ಸು ಬರುವ ವೇಳೆಗಾಗಲೆ ಇಂದೂ ಸಾಂಪ್ರದಾಯಗಳಲ್ಲಿ ಮೂರನೆಯದಾದ ಉಪ ನಯನ, ನಾಲ್ಕನೆಯದಾದ ಉಪದೇಶವನ್ನು ಯುವಕರು ತಪ್ಪದೆ ಹೊಂದುತ್ತಿದ್ದರು. ಗುರುವಿನ ಮೂಲಕ ಮೊಟ್ಟಮೊದಲನೆ ಜ್ಞಾನಬೋಧನೆಯಿಂದ ಉಪನಯನವನ್ನು ಏರ್ಪಡಿಸಿಕೊಳ್ಳಬಹುದೆಂದು ತಿಳಿದುಕೊಂಡಿದ್ದೇವೆ. ನಂತರ ಉಪದೇಶವನ್ನು ಹೇಗೆ ಹೊಂದಬೇಕೆಂಬುದನ್ನು ತಿಳಿದುಕೊಳ್ಳೋಣ. ಉಪನಯನ ಹೊಂದಿದ ನಂತರ ಅವನ ಶ್ರದ್ಧೆಯನ್ನನುಸರಿಸಿ ಅವನು ಉಪದೇಶಕ್ಕೆ ಅರ್ಹನಾಗಿರಬಹುದು. ಶ್ರದ್ಧೆ ಎಷ್ಟು ಹೆಚ್ಚಾಗಿದ್ದರೆ ಅಷ್ಟು ಶೀಘ್ರವಾಗಿ ಉಪದೇಶವನ್ನು ಹೊಂದಬಹುದು. ಉಪನಯನಕ್ಕೆ ಬುದ್ಧಿಗ್ರಹಿತ ಶಕ್ತಿ ಹೇಗೆ ಅವಶ್ಯಕವೋ ಹಾಗೆಯೇ ಉಪದೇಶಕ್ಕೆ ಶ್ರದ್ಧಾ ಶಕ್ತಿ ಅಗತ್ಯ. ಬುದ್ಧಿ ಗ್ರಹಿತದಿಂದ ಉಪನಯನಕ್ಕೆ ದೃಷ್ಟಿ ಚೆನ್ನಾಗಿ ಉಂಟಾಗು ವಂತೆ ಮಾಡಿಕೊಂಡ ನಂತರ ಆ ದೃಷ್ಠಿಯ ಮೂಲಕ ನೋಡಬೇಕಾಗಿರುವುದು ಉಪದೇಶವನ್ನೇ. ಆದ್ದರಿಂದ ಒಂದು ಅನುಕೂಲವಾದ ಮಂಗಳವಾರ ದಿನದಂದು ಶುಭ ಮುಹೂರ್ತವನ್ನು ನೋಡಿಕೊಂಡು ಜ್ಞಾನವನ್ನು ಬೋಧಿಸಿ ಉಪನಯನ ಮಾಡಿಸಿದ ಗುರುವಿನಿಂದ ಉಪದೇಶ ಮಾಡಿಸಿಕೊಳ್ಳುತ್ತಾರೆ. ಉಪದೇಶವೆಂದರೆ ಗುರುವಿನಿಂದ ಜ್ಞಾನಶಕ್ತಿಯನ್ನು ಅಥವಾ ಜ್ಞಾನಾಗ್ನಿಯನ್ನು ದಾನ ಮಾಡಿ ಸಿಕೊಳ್ಳುವುದು. ಅಲ್ಲಿಯವರೆಗೂ ಜ್ಞಾನವನ್ನು ಬೋಧಿಸಿ ಉಪನಯನಕ್ಕೆ ದೃಷ್ಟಿ ತಂದು ಕೊಟ್ಟ ಗುರುವು ಉಪದೇಶ ದಿನದಂದು ತನ್ನೊಳಗಿನ ಜ್ಞಾನಾಗ್ನಿಯನ್ನು ಶಿಷ್ಯನೊಳಗೆ ಪ್ರವೇಶ ಮಾಡಿಸುತ್ತಾನೆ. ಅಲ್ಲಿಯವರೆಗೂ ಜ್ಞಾನವನ್ನು ದಾನ ಮಾಡಿದ ಗುರುವು ಜ್ಞಾನಾಗ್ನಿಯನ್ನು ದಾನ ಮಾಡುವುದನ್ನು ನಿಜವಾದ ಉಪದೇಶ ಅನ್ನುತ್ತೇವೆ.

ಉಪನಯನವೆಂದರೆ ಪ್ರತ್ಯೇಕವಾದ ನೋಟವಿದೆ ಎಂದಾಗ, ಉಪದೇಶ ನಡೆದಾಗ ಶಿಷ್ಯನಿಗೆ ಏನು ಕಾಣಿಸುತ್ತದೆಂದು ಕೆಲವರು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಉಪದೇಶ ಹೊಂದಿದ ಸಮಯದಲ್ಲಿ ಪ್ರತ್ಯೇಕವಾಗಿ ಕಾಣಿಸುವುದೇನೂ ಇರುವುದಿಲ್ಲ. **ಕಣ್ಣಿಲ್ಲದ ಕಣ್ಣು ಜ್ಞಾನನೇತ್ರ, ನೋಟವಲ್ಲದ**

**ನೋಟ ಜ್ಞಾನದೃಷ್ಟಿ, ದೃಶ್ಯವಲ್ಲದ ದೃಶ್ಯ ಜ್ಞಾನಶಕ್ತಿ (ಜ್ಞಾನಾಗ್ನಿ), ದೇಶವಲ್ಲದ ದೇಶ ಉಪದೇಶ.** ಆದ್ದರಿಂದ ಉಪದೇಶ ಹೊಂದಿದವನಿಗೆ ಕಾಣಿಸುವುದೇನೂ ಇರುವುದಿಲ್ಲ. ಉಪದೇಶ ಹೊಂದಿದವನು ನಂತರ ಗುರುಗಳು ಹೇಳಿದಂತೆ ಯೋಗಸಾಧನೆ ಮಾಡಬೇಕಾಗುತ್ತದೆ. ಉಪದೇಶ ಹೊಂದಿದ ನಂತರ ಯೋಗ ಸಾಧನೆ ಮಾಡುವುದರಿಂದ ಗುರುಗಳು ಕೊಟ್ಟಿರುವ ಜ್ಞಾನಾಗ್ನಿ ಪ್ರಜ್ವಲಿ ಸುತ್ತಿರುತ್ತದೆ. ಯೋಗ ಮಾಡದವನಿಗೆ ಜ್ಞಾನಾಗ್ನಿ ಬೆಳೆಯುತ್ತಾ ಹೋಗುವುದಿಲ್ಲ. ಉಪದೇಶ ಹೊಂದಿದ ನಂತರ ಜ್ಞಾನಾಗ್ನಿ ಬೆಳೆದು ಕರ್ಮಗಳೆಂಬ ಕಟ್ಟಿಗೆಗಳನ್ನು ಸುಡುವ ಸಾಮರ್ಥ್ಯ ಯೋಗಸಾಧನೆ ಮಾಡಿದಾಗಲೆ ಉಂಟಾಗುವುದೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಭಗವಂತನಾದ ಶ್ರೀಕೃಷ್ಣನಿಂದ ಹೇಳಲ್ಪಟ್ಟಿರುವ ಎರಡು ವಿಧಗಳ ಯಜ್ಞಗಳಲ್ಲಿ ಜ್ಞಾನಯಜ್ಞದಲ್ಲಿ ಉಪಯೋಗವಾಗುವ ಅಗ್ನಿ ಜ್ಞಾನಾಗ್ನಿಯೇ ಎಂದು ಮರೆಯಬಾರದು. ಅಗ್ನಿಯಲ್ಲದ ಅಗ್ನಿ ಜ್ಞಾನಾಗ್ನಿ, ಕಟ್ಟಿಗೆಗಳಲ್ಲದ ಕಟ್ಟಿಗೆಗಳನ್ನು ಕರ್ಮ ಕಟ್ಟಿಗೆಗಳನ್ನು ಸುಡುವುದರಿಂದ ಕರ್ಮ ಶೇಷವಿಲ್ಲದಂತೆ ಹೋದ ಮಾನವನು ಮುಕ್ತಿ ಹೊಂದುತ್ತಿದ್ದಾನೆ. ಕೊನೆಗೆ ಮುಕ್ತಿ ಹೊಂದುವುದಕ್ಕೆ, ದೇವರಲ್ಲಿ ಸೇರಲು ಉಪದೇಶ ತಪ್ಪದೆ ಅಗತ್ಯ. ಆದ್ದರಿಂದ ಪೂರ್ವದಲ್ಲಿ ಜ್ಞಾನ ತಿಳಿದ ಹಿರಿಯರು ಉಪದೇಶವನ್ನು ಸಾಂಪ್ರದಾಯ ಬದ್ಧವಾಗಿ ಮಾಡಿದ್ದಾರೆ.

ಮಾನವನು ಕರ್ಮದಿಂದ ಬಿಡುಗಡೆ ಹೊಂದಲು ಹಿರಿಯರು ಮಾಡಿರುವ ಪ್ರಯತ್ನಗಳೇ ಇಂದೂ ಸಾಂಪ್ರದಾಯಗಳು. ಕಾಲಗಮನದಲ್ಲಿ ಸಾಂಪ್ರದಾಯಗಳು ಮಾಸಿಹೋಗಿ ತಿಳಿಯದಂತೆಹೋಗುತ್ತಿವೆ. ಸ್ವಲ್ಪ ಮಟ್ಟಿಗೆ ಎಲ್ಲಿಯಾದರೂ ಸಾಂಪ್ರದಾಯದ ಆಚರಣೆಗಳಿದ್ದರೂ ಅವುಗಳಿಗೆ ಅರ್ಥ ತಿಳಿಯುತ್ತಿಲ್ಲ. ಇಂದಿಗೂ ಗುರುಗಳಿದ್ದಾರೆ, ಶಿಷ್ಯರಿದ್ದಾರೆ, ಉಪದೇಶದ ಕಾರ್ಯ ಕ್ರಮಗಳು ಇವೆ. ಆದರೂ ಉಪನಯನದಲ್ಲಿ ಜ್ಞಾನವಾಗಲಿ, ಉಪ ದೇಶದಲ್ಲಿ ಜ್ಞಾನಶಕ್ತಿಯಾಗಲಿ ಇಲ್ಲ. ಹಾಗೆಯೇ ಶಿಷ್ಯರು ಮಾಡುವ ಯೋಗಗಳಲ್ಲಿ ಕರ್ಮಗಳು ಸುಡುವುದಿಲ್ಲ. ಭಗವದ್ಗೀತೆಯಲ್ಲಿ ದೇವರು ಹೇಳಿದ ಯೋಗಗಳೆರಡನ್ನು ಬಿಟ್ಟು

ಮಾನವನು ಹೊಸ ಹೆಸರು ಇಟ್ಟುಕೊಂಡು, ಹೊಸ ಯೋಗಗಳನ್ನು ಮಾಡುತ್ತಿದ್ದಾನೆ. ಅಂತಹ ಯೋಗಗಳು ಎಷ್ಟು ಮಾಡಿದರು ಕೂಲಿ ಇಲ್ಲದ ಕೆಲಸಗಳಂತಾಗುತ್ತದೆ. ಫಲಿತವಿಲ್ಲದ ಸಾಧನೆ ಎಷ್ಟು ಮಾಡಿದರು ಏನು ಪ್ರಯೋಜನವೆಂದು ತಿಳಿಯದಂತಿದ್ದಾರೆ. ಮತ್ತೊಂದು ವಿಚಿತ್ರವೇನೆಂದರೆ ಕೆಲವು ಜನ ಗುರುಗಳು ಮೋಕ್ಷಮಾರ್ಗವನ್ನು ತೋರಿಸುವವು ಯೋಗಗಳೆಂದು ಹೇಳದೆ, ಆರೋಗ್ಯ ಸೂತ್ರಗಳನ್ನು ಹೇಳುತ್ತಾ ಸಿದ್ಧಿ ಸಮಾಧಿ ಯೋಗಗಳು ಮಾಡಿದರೆ ರೋಗಗಳು ಹೋಗುತ್ತವೆಂದು, ಮೂತಿ ಮೇಲೆ ಧ್ಯಾಸ ಇಟ್ಟುಕೊಂಡರೆ ರೋಗಗಳು ಬರುವುದಿಲ್ಲವೆಂದು, ನೋವುಗಳು ಹೋಗಬೇಕೆಂದರೆ ನೋವಿನ ಮೇಲೆ ಧ್ಯಾಸವಿಡಬೇಕೆಂದು ಅನೇಕ ವಿಧಗಳಾದ ಆರೋಗ್ಯ ಯೋಗಗಳನ್ನು ಹೇಳುತ್ತಿದ್ದಾರೆ. ದೈವವು ಹೇಳಿರುವ ಕರ್ಮ ನಿರ್ಮೂಲನೆಯ ಯೋಗಗಳನ್ನು ಹೇಳದೆ ರೋಗ ನಿರ್ಮೂಲನೆ ಯೋಗಗಳನ್ನು ಹೇಳಿದರೆ ಮನುಷ್ಯರು ದೈವ ಮಾರ್ಗದ ಕಡೆಗೆ ಪ್ರಯಾಣ ಮಾಡಬಲ್ಲರಾ?

ಇಂದೂ ಸಾಂಪ್ರದಾಯಗಳು ಎಂದರೆ ಏನು? ದೈವಧರ್ಮಗಳೆಂದರೆ ಏನು? ಅಂದಾಗ ನೋಟವಿಲ್ಲದಿರುವಾಗ ಸಾಂಪ್ರದಾಯಗಳು ಕೆಟ್ಟುಹೋಗುತ್ತವೆ, ಧರ್ಮಗಳು ಅಧರ್ಮಗಳಾಗಿ ಬದಲಾಗಬಹುದು. ಈಗ ಸಾಂಪ್ರದಾಯಗಳು ತಿಳಿಯದೆ ಹೋಗಿರುವುದರಿಂದ, ಧರ್ಮಗಳು ಅಧರ್ಮಗಳಾಗಿ ಬದಲಾಗುವು ದರಿಂದ ಎಲ್ಲಿಯಾದರೂ ಆಧ್ಯಾತ್ಮಿಕ ಉಪದೇಶ ನಡೆದರೆ ಅದು ಹೆಸರಿಗೆ ಉಪದೇಶವಾಗಲಿ ವಾಸ್ತವಕ್ಕೆ ಉಪದೇಶವಲ್ಲ. ಅಂತಹ ಗುರುವಿನ ಉಪದೇಶಗಳಲ್ಲಿ ಅಷ್ಟಾಕ್ಷರಿ, ಪಂಚಾಕ್ಷರಿ ಮಂತ್ರದಲ್ಲಿ, ಸೋಹಮ್ ಎಂಬ ಮಂತ್ರವೊ, ರಾಮ ಎಂಬ ಮಂತ್ರವೊ ಯಾವುದೋ ಒಂದನ್ನು ಶಿಷ್ಯನಿಗೆ ಕಿವಿಯಲ್ಲಿ ಬೋಧಿಸುವುದು ನಡೆಯುತ್ತಿದೆ. ಪೂರ್ವದಲ್ಲಿ ಇಂದ್ರಿಯಾತೀತ ಜ್ಞಾನಾಗ್ನಿಯನ್ನು ಗುರುಗಳು ಶಿಷ್ಯರಿಗೆ ದಾನ ಮಾಡಿರುವಾಗ ಈದಿನ ಇಂದ್ರಿಯ ಸಂಬಂಧವಾದ ಶಬ್ದಮಂತ್ರಗಳನ್ನು ಉಪದೇಶವೆಂದು ಬೋಧಿಸುವುದು ದೈವಮಾರ್ಗಕ್ಕೆ ವಿರುದ್ಧವಲ್ಲವೆ? ದೈವಮಾರ್ಗದಲ್ಲಿ, ಸಾಂಪ್ರದಾಯ ಪದ್ಧತಿಗಳಲ್ಲಿ

ಎಷ್ಟೋ ವಿಧಗಳು ಕೆಟ್ಟು ಹೋದ ನಾವು ಈಗಲಾದರೂ ಎಚ್ಚರಗೊಂಡು ನಮ್ಮ ಇಂದೂ ಸಂಪ್ರದಾಯಗಳು ಯಾವುವು ಎಂಬುವುದನ್ನು ಎಷ್ಟು ದೊಡ್ಡವೆಂದು ಆಲೋಚಿಸುವ ಸ್ಥಿತಿಗೆ ಸೇರಬೇಕು. ಕೊನೆ ಉಸಿರಿನಿಂದಿರುವ ಇಂದೂ ಸಾಂಪ್ರದಾಯಗಳನ್ನು ಪುನಃ ಆಚರಿಸಲು ಪ್ರಯತ್ನಿಸಬೇಕು. ಹಾಗೆ ಮಾಡಿದಾಗ ದೊಡ್ಡವರು ನಮಗೋಸ್ಕರ ಮಾಡಿದ ಪ್ರಯತ್ನವೂ ನೆರವೇರಿ ದಂತಾಗುತ್ತದೆ. ನಾವು ಸಹ ದೈವಮಾರ್ಗವನ್ನು ಅನುಸರಿಸಿ ಕೊನೆಗೆ ಮೋಕ್ಷವನ್ನು ಹೊಂದಬಹುದು. ಆದ್ದರಿಂದ ನೀನು ಚಿಕ್ಕವನಾಗಿದ್ದರೆ ಉಪನಯನವನ್ನು ಉಪದೇಶವನ್ನು ಹೊಂದು. ದೊಡ್ಡವನಾಗಿದ್ದರೆ ನಿನ್ನ ಮಕ್ಕಳಿಗಾದರೂ ಉಪನಯನ ಉಪದೇಶಗಳನ್ನು ಸಂಪ್ರಾಪ್ತವಾಗುವಂತೆ ಮಾಡು.



# ಮದುವೆ – ಮದುಮಗ, ಮದುಮಗಳು

ಮದುವೆ ಎಂಬ ಪದವು ಬಹುಶಃ ಎಲ್ಲರಿಗೂ ತಿಳಿದಿರುವುದೆ. ಪ್ರತಿಯೊಬ್ಬರ ಜೀವನದಲ್ಲಿ ಮದುವೆ ಒಂದು ದಿನ ತಪ್ಪದೆ ಬರುವುದಾಗಿ ಅದು ಮರೆಯಲಾಗದಂತಹ ಪರ್ವದಿನವಾಗಿ ಉಳಿದುಕೊಳ್ಳುತ್ತದೆ. ಮದುವೆ ಎಂಬುವುದು ವಿಶೇಷವಾದ ಅರ್ಥಕೊಡುವ ಕಾರ್ಯಕ್ರಮವಾಗಿ ನಮ್ಮ ಹಿರಿಯರು ರೂಪಿಸಿದ್ದಾರೆ. ಮುಖ್ಯವಾಗಿ ಹೇಳಬೇಕೆಂದರೆ ವಿಶೇಷವಾದ ಅರ್ಥಗಳನ್ನು ತಿಳಿಸುವ ಕಾರ್ಯಗಳಿಂದ ಕೂಡಿಕೊಂಡ ಪ್ರತ್ಯೇಕ ಕಾರ್ಯಕ್ರಮವೆಂದು ಹೇಳ ಬಹುದು. ಇದರಲ್ಲಿ ಮುಖ್ಯವಾಗಿ ಮೊದಲು ಮದುಮಗನನ್ನು, ಮದುಮಗಳನ್ನು ತಯಾರು ಮಾಡುವ ಕಾರ್ಯವನ್ನು ವಿವರಿಸಿಕೊಳ್ಳೋಣ. ಅಲ್ಲಿಯವರೆಗೂ ಸಾಧಾರಣವಾಗಿರುವವನನ್ನು ಪ್ರತ್ಯೇಕಿಸಿ ಮದುಮಗನಾಗಿ ತಯಾರು ಮಾಡುವುದು ಎಲ್ಲರಿಗೂ ತಿಳಿದಿರುವುದೆ. ಹಾಗೆಯೇ ಸಾಧಾರಣ ವಾಗಿರುವ ಸ್ತ್ರೀಯನ್ನೂ ಸಹ ಪ್ರತ್ಯೇಕವಾದ ಅಲಂಕರಣೆ ಆಚಾರಗಳಿಂದ ಮದುಮಗಳನ್ನು ಮಾಡುವುದು ಸಹ ತಿಳಿದ ವಿಷಯವೆ. ಇದರಲ್ಲಿ ತಿಳಿಯದಿರುವುದೇನಿದೆ ಎಲ್ಲರಿಗೂ ತಿಳಿದಿರುವ

ವಿಷಯವೇ ಅಲ್ಲವೆ! ಎಂದು ಅಂದುಕೊಂಡರೂ ನಮಗೆ ತಿಳಿಯದ ವಿಷಯವೆಷ್ಟೋ ಇದೆಯೆಂದು ಹೇಳಿಕೊಳ್ಳಬಹುದು. ಗಂಡಸರನ್ನಾದರೆ ಮದುಮಗನೆಂದು, ಹೆಂಗಸರನ್ನಾದರೆ ಮದುಮಗಳಾಗಿ ಮಾಡುವುದು ಇಂದೂ ಸಾಂಪ್ರದಾಯ ಸಿದ್ಧವಾದ ಕೆಲಸ. ಹಾಗೆಯೇ ಮದುವೆಗೆ ಸಂಬಂಧಿಸಿದ ಪ್ರತಿಯೊಂದು ಕೆಲಸವೂ ಸಾಂಪ್ರದಾಯ ಸಿದ್ಧವಾದುದೆ.

**ಸಾಂಪ್ರದಾಯವೆಂದರೆ ವಿಶೇಷವಾದ ಅರ್ಥದಿಂದ ಕೂಡಿಕೊಂಡಿರುವ ಧರ್ಮದ ಆಚರಣೆ ಎಂದು ಅರ್ಥ**. ಇಂದೂಗಳ ಸಾಂಪ್ರದಾಯಗಳೆಲ್ಲವುಗಳಲ್ಲಿ ಯಾವ ಧರ್ಮವು, ಯಾವ ಅರ್ಥದಿಂದ ಇದೆಯೋ ತಿಳಿಯದೆ ಹೋದಾಗ ಸಾಂಪ್ರದಾಯ ಆಚರಿಸಿದರೂ ಆಚರಿಸದೆಹೋದರೂ ಒಂದೇ. ಮುಖ್ಯವಾಗಿ ಅರ್ಥ ತಿಳಿಯದಿರುವಾಗ ಆಚರಿಸುವ ಸಾಂಪ್ರದಾಯಗಳು ಅಧರ್ಮ ಯುಕ್ತವಾಗಿಹೋಗುವುದಕ್ಕೆ ಅವಕಾಶ ಇದೆ. ಪೂರ್ವಕಾಲದಲ್ಲಿನ ಜ್ಞಾನಿಗಳು ದೈವ ಜ್ಞಾನದಿಂದ ಕೂಡಿಕೊಂಡಿರುವ ಧರ್ಮಗಳ ಪ್ರಕಾರವಾಗಿ ಸೃಷ್ಟಿಸಿರುವವೇ ಸಾಂಪ್ರದಾಯಗಳು. ಈಗ ಮದುವೆ ಆಚರಣೆಯ ವಿವರವನ್ನು ತಿಳಿದುಕೊಳ್ಳೋಣ. ತಂದೆತಾಯಿಗಳಿಗೆ ಹುಟ್ಟಿದವರನ್ನು ಇಂತಹವರ ಸಂತತಿ ಎನ್ನುತ್ತೇವೆ. ಇವನು ಯಾರು ಎಂದು ಒಬ್ಬನನ್ನು ಕುರಿತು ಕೇಳಿದಾಗ ಅವನು ಇಂತಹವರ ಮಗನೆಂದು ನಾವು ಸಮಾಧಾನ ಕೊಡುತ್ತೇವೆ. ಹಾಗೆಯೇ ಸ್ತ್ರೀಯರನ್ನಾದರೆ ಇಂತಹವರ ಮಗಳೆಂದೂ ಸಹ ಹೇಳುತ್ತೇವೆ. ಉದಾಹರಣೆಗೆ ರಾಮಯ್ಯನ ಮಗ, ರಾಮಯ್ಯನ ಮಗಳೆಂದು ಇಬ್ಬರೂ ಯುವತಿ ಯುವಕರನ್ನು ಕುರಿತು ಹೇಳಿದ್ದೇವೆಂದು ಕೊಳ್ಳೋಣ. ಆ ಇಬ್ಬರಲ್ಲಿ ಒಬ್ಬರು ಅಣ್ಣನಾದರೆ ಮತ್ತೊಬ್ಬರು ತಂಗಿಯಾಗಿರುತ್ತಾರೆ. ಹಾಗಲ್ಲದೆ ಒಬ್ಬರು ಅಕ್ಕ ಆದರೆ ಮತ್ತೊಬ್ಬರು ತಮ್ಮ ನಾಗುತ್ತಾನೆ. ಇಬ್ಬರಿಗೂ ಒಬ್ಬನೆ ತಂದೆ ಆದಾಗ ಅವರಿಬ್ಬರೂ ಸೋದರಿ ಸೋದರರಾಗಿರುತ್ತಾರೆ. ಈಗ ವಾಸ್ತವ ವಿಷಯಕ್ಕೆ ಬರೋಣ. ಮದುವೆ ಕಾರ್ಯದಲ್ಲಿ ಮದುಮಗನನ್ನು, ಮದುಮಗಳನ್ನು, ತಯಾರು ಮಾಡುವುದು ಎಲ್ಲರಿಗೂ ತಿಳಿದಿರುವ ವಿಷಯವೆ. ಒಂದೇ ಮದುವೆಗೆ ಮಗ ಮಗಳು ಆಗುವುದರಲ್ಲಿ ಮದುಮಗ ಮದುಮಗಳು

ಸೋದರ ಸೋದರಿಯರ ಸಂಬಂಧ ಹೊಂದಿದ್ದಾರೆಂದು ಸುಲಭವಾಗಿ ತಿಳಿಯುತ್ತಿದೆ. ರಾಮಯ್ಯನ ಮಗ, ರಾಮಯ್ಯನ ಮಗಳೆಂದು ಇಬ್ಬರನ್ನು ಕುರಿತು ಹೇಗೆ ಹೇಳಿದ್ದೇವೆಯೋ, ಹಾಗೆಯೇ ಇಲ್ಲಿ ಮದುಮಗ ಮದುಮಗಳು ಅನ್ನುತ್ತಿದ್ದೇವೆ. ಆದ್ದರಿಂದ ಮದುವೆ ತಂದೆಯಾದಾಗ, ಆ ತಂದೆಗೆ ಸಂತತಿಯಾಗಿ ಒಬ್ಬ ಯುವತಿ ಒಬ್ಬ ಯುವಕನು ತಯಾರಾಗಿದ್ದಾರೆಂಬಮಾತು. ಅಲ್ಲಿಯವರೆಗೂ ಯಾರಿಗೋ ಹುಟ್ಟಿ ಬೇರೆಬೇರೆಯಾಗಿ ತಂದೆಯನ್ನು ಹೊಂದಿರುವವರು ಒಂದು ದಿನ ಆ ತಂದೆ ಹೆಸರು ಹೇಳದೆ ಪ್ರತ್ಯೇಕಿಸಿ ಮಧುಮಗ ಮಧುಮಗಳೆಂದು ಹೇಳುವುದನ್ನು ಆಲೋಚಿಸಿದರೆ ಅರ್ಥವಾಗದ ವಿಚಿತ್ರವೇ ಅಲ್ಲವೆ! ಅರ್ಥ ವಾಗದಿರುವಾಗ, ವಿವರ ತಿಳಿಯದಿರುವಾಗ ವಿಚಿತ್ರವಾಗಿಯೇ ಇರುತ್ತದೆ. ಅಂತಹದರಲ್ಲಿ ಎಷ್ಟೋ ಪ್ರಶ್ನೆಗಳು ನಮಗೆ ಉದ್ಭವಿಸುತ್ತವೆ. ಅವು ಏನೆಂದರೆ! ಮದುವೆ ಎಂಬುವುದು ಇಬ್ಬರಬಗ್ಗೆ ಒಂದೇ ಆದಾಗ, ಮದುವೆಗೆ ಇಬ್ಬರು ಮಗ ಮಗಳು ಆದಾಗ ಅಣ್ಣ ತಂಗಿ ಸಂಬಂಧ ಆಗುತ್ತದಲ್ಲವೆ! ಅಂತಹ ಸಂದರ್ಭದಲ್ಲಿ ಇಬ್ಬರೂ ಒಂದುಕಡೆ ಸೇರಿ ಸಂತಾನೋತ್ಪತ್ತಿಮಾಡಿರೆಂದು ಹೇಳುವುದೇನು? ಅಲ್ಲಿಯವರೆಗೂ ಬೇರೆ ಇರುವವರನ್ನು ಆ ದಿನ ಮಗ ಮಗಳೆಂದು ಮದುವೆ ಮಾಡಿ ನಂತರ ಪತಿ ಪತ್ನಿ ಅನ್ನುವುದೇನು? ಹೀಗೆ ಎಷ್ಟೋ ಪ್ರಶ್ನೆಗಳಿಗೆ ಸಮಾಧಾನ ಹುಡುಕಬೇಕಾಗಿದೆ. ಮದುವೆಗೆ ಸಂಬಂಧಿಸಿದ ಧರ್ಮ ಏನೆಂದು ಹಿರಿಯರ ಮೂಲಕ ತಿಳಿದುಕೊಳ್ಳಬೇಕಾಗಿದೆ. ಪೂರ್ವದಲ್ಲಿ ಹಿರಿಯರು ತಿಳಿಸಿದ ವಿವರವು ಈಗ ತಿಳಿಸುವವರು ವಿರಳವಾಗಿರುವುದರಿಂದ ಪೂರ್ವದಲ್ಲಿ ಏನು ಹೇಳಿದ್ದಾರೊ ವಿವರಿಸಿ ತಿಳಿದುಕೊಳ್ಳೋಣ.

ಭೂಮಿ ಮೇಲೆ ಹುಟ್ಟಿದ ಹೆಣ್ಣು ಗಂಡು ಪ್ರತಿ ಮನಷ್ಯ ಬಾಲ್ಯದಿಂದ ಯುಕ್ತವಯಸ್ಸು ಬರುವವರೆಗೂ ದೈವಜ್ಞಾನ ತಿಳಿಯದವರಾಗಿ ಅವರ ಧ್ಯಾಸ ವೆಲ್ಲವೂ ವಿದ್ಯಾಭ್ಯಾಸದ ಮೇಲೆ, ಆಟಗಳ ಮೇಲೆ ಇರುತ್ತಾ ಜೀವನದ ಗಮ್ಯ ಇದು ಎಂದು ತಿಳಿಯದವರಾಗಿ ಇರುತ್ತಾರೆ. ಅಂತಹವರಿಗೆ ವಯಸ್ಸು ಬಂದ ನಂತರ ಒಬ್ಬ ಪುರುಷನಿಗೆ ಒಬ್ಬ ಸ್ತ್ರೀಯನ್ನು ಜೊತೆ ಮಾಡಿ ಆ ದಿನದಿಂದ

ಜ್ಞಾನಮಾರ್ಗದಲ್ಲಿ ನಡೆದುಕೊಳ್ಳುತ್ತಾ ದೈವವನ್ನು ತಿಳಿಯಿರೆಂದು ತಿಳಿಸುವ ಕಾರ್ಯವೆ ಮದುವೆ ಕಾರ್ಯ. ಇಲ್ಲಿಯವರೆಗೂ ಇಂತಹವರ ಮಗ ಮಗಳೆಂದುಕೊಂಡ ನೀವು ನಿಜವಾಗಿ ಅವರ ಸಂತತಿ ಅಲ್ಲವೆಂದೂ ನಿಮ್ಮ ತಂದೆ ಪ್ರತ್ಯೇಕಿಸಿ ಇದ್ದಾನೆಂದು, ನಿಮಗೇ ಅಲ್ಲ ನಿಮ್ಮಂತೆ ಎಲ್ಲರಿಗೂ ಒಬ್ಬನೇ ತಂದೆ ಇರುವನೆಂದು ತಿಳಿಸುವ ಅರ್ಥದಿಂದ ಕೂಡಿಕೊಂಡಿರುವುದೇ ಮದುಮಗ, ಮದುಮಗಳನ್ನು ಮಾಡುವುದು. **ಭಗವದ್ಗೀತೆಯಲ್ಲಿ ಗುಣತ್ರಯ ವಿಭಾಗ ಯೋಗದಲ್ಲಿ ಸರ್ವ ಜೀವಿಗಳಿಗೂ ತಂದೆ ನಾನು ತಾಯಿ ಪ್ರಕೃತಿ ಎಂದು ಭಗವಂತನು ಹೇಳಿದ ಮುಖ್ಯವಾದ ಜ್ಞಾನ ಇದೆ.** ಅಲ್ಲಿ ದೇವರು ತಿಳಿಸಿರುವ ಧರ್ಮವು ಎಲ್ಲರಿಗೂ ತಿಳಿಯಲು ಅದರ ಆಚರಣೆ ಕಾರ್ಯರೂಪದಲ್ಲಿ ತಿಳಿಸಬೇ ಕೆಂಬುವುದೇ ಮದುವೆಯಲ್ಲಿನ ಮದುಮಗ ಮದುಮಗಳೆಂದು ತಿಳಿಯಬೇಕು. ಎಲ್ಲರಿಗೂ ತಂದೆ ಪರಮಾತ್ಮ, ಅದರ ಅರ್ಥವೇ ಆಚರಣೆಯಲ್ಲಿ **"ಮದುವೆ"** ಎಂಬ ಪದ ಇಬ್ಬರಿಗೂ ತಂದೆಯಾಗಿದೆ.

ಸರ್ವ ಪ್ರಪಂಚವನ್ನೂ ಸೃಷ್ಟಿಸಿದವನಾಗಿ, ಎಲ್ಲ ಮತಗಳಿಗೂ ಅಧಿಪತಿಯಾಗಿ ಎಲ್ಲ ಕಡೆಯಲ್ಲೂ ಎಲ್ಲರಲ್ಲಿಯೂ ವ್ಯಾಪಿಸಿ ಹೆಸರು, ಆಕಾರ ಇಲ್ಲದವನಾದ ಪರಮಾತ್ಮನ ಗುರುತೇ **"ಮದುವೆ"**ಯ ಪದ. ಮದುವೆ ದೈವವೆಂದು ಅದಕ್ಕೆ ಇಂದಿನಿಂದ ನೀವು ಜ್ಞಾನೋದಯದಿಂದ ಮಗ ಮಗಳೆಂದು ತಿಳಿದುಕೊಳ್ಳಬೇಕೆಂದು ತಿಳಿಸುವುದಕ್ಕೇ ಮದುಮಗ, ಮದುಮಗಳೆಂದು ಹೆಸರಿಟ್ಟಿದ್ದಾರೆಂದು ತಿಳಿದುಕೊಳ್ಳಬೇಕು. ಅಲ್ಲಿಯವರೆಗೂ ಅಜ್ಞಾನದಲ್ಲಿ ಇರುವ ವರೂ ಸಹ ಇಂದಿನಿಂದ ದೈವವೇನೆಂದು, ನಾವು ಯಾರೆಂದು, ನಾವು ಹೇಗಿರಬೇಕೆಂದು ತಿಳಿದುಕೊಳ್ಳುವಂತೆ ಮಾಡಿರುವುದೇ ಮದುವೆ ಕಾರ್ಯ.

ಉಪನಯನ ಉಪದೇಶಗಳು ಹೊಂದಿದ್ದರೂ ಸಹ ಅಜ್ಞಾನದಲ್ಲಿ ಮುಳುಗಿಹೋದವರು, ಒಂದುವೇಳೆ ಅಲ್ಲಿಯವರೆಗೂ ಉಪನಯನ ಉಪದೇಶ ಗಳನ್ನು ಹೊಂದದವರೂ, ದೇವರ ಜ್ಞಾನ ಏನೆಂದು ತಿಳಿಯದೇ ಅಜ್ಞಾನದಲ್ಲಿ ಬದುಕುತ್ತಿರುವವರು, ಮದುವೆಯ ದಿನದಿಂದ ಜ್ಞಾನಪರವಾಗಿ ಬದಲಾಗದೆ

ನಾವು ಯಾರ ಸಂತತಿಯೆಂದು ತಿಳಿಯದೆ ಹೋದರೆ ಅವನ ಮದುವೆ ನಿರರ್ಥಕವೆ. ಜ್ಞಾನ ತಿಳಿಯದ ಜೀವನವು ವ್ಯರ್ಥವಾಗುತ್ತದೆ. ಬಾಲ್ಯದಿಂದ ಯೌವ್ವನಕ್ಕೆ ಪ್ರವೇಶಿಸಿದ ಜೀವನವೇ ದೈವಜ್ಞಾನ ತಿಳಿದುಕೊಳ್ಳಲು ಅರ್ಹತೆ ಹೊಂದಿದೆ. ಆದ್ದರಿಂದ ಭೂಮಿ ಮೇಲೆ ಹುಟ್ಟಿದ ಹೆಣ್ಣು ಗಂಡು ಇಬ್ಬರೂ ದೈವ ಸಂತತಿ ಎಂದು ತಿಳಿಸುವ ಮೊದಲ ಜ್ಞಾನ ಸಂದೇಶವೆ ಮದು ಮಗ, ಮದು ಮಗಳೆನ್ನುವ ಮಾತು. ಜ್ಞಾನದಿಂದ ಕೂಡಿಕೊಂಡಿರುವ ಎಷ್ಟೋ ವಿಷಯ ಗಳು ತಿಳಿದುಕೊಳ್ಳಲು, ಜಗತ್ತೆಲ್ಲಾ ದೈವ ಸಂತತಿಯೆಂಬ ವಿಷಯಗಳನ್ನು ತಿಳಿದುಕೊಳ್ಳಲು ಮೊದಲ ದಿನವೇ ಮದುವೆಯ ದಿನ. ಆ ದಿನವೇ ಜೀವನದಲ್ಲಿ ತಿಳಿದುಕೊಳ್ಳಬೇಕಾದ ಉಳಿದ ಜ್ಞಾನ ಸಂದೇಶಗಳೆಲ್ಲವನ್ನೂ ಕಾರ್ಯರೂಪಗಳಾಗಿ ಇಟ್ಟಿದ್ದಾರೆ. ಆದ್ದರಿಂದ ಮದುವೆಯ ದಿನವನ್ನು ಸಂಪೂರ್ಣ ಜ್ಞಾನ ಸಂದೇಶ ದಿನವೆಂದು ಎನ್ನುತ್ತಾರೆ. ಆ ದಿನದಂದು ಆಚರಿಸಬೇಕಾದವುಗಳಲ್ಲಿ ಕೆಲವನ್ನು ಕೆಳಗೆ ಬರೆದಿದ್ದೇವೆ ನೋಡಿರಿ.



# ಜೋಡಿ ಮದುಮಗ

ಇಂದೂ ಸಾಂಪ್ರದಾಯಗಳ ಪ್ರಕಾರ ವಿವಾಹ ಕಾರ್ಯದಲ್ಲಿ ಮದುಮಗನ ಪಕ್ಕದಲ್ಲಿ ಜೊತೆಯಾಗಿ ಮತ್ತೊಬ್ಬ ವ್ಯಕ್ತಿ ಮದುಮಗನಾಗಿ ಇರುವನು. ಆತನನ್ನು **"ಜೋಡಿ ಮದುಮಗ"** ನೆಂದು ಹೆಸರಿಟ್ಟು ಕರೆಯುವುದು ನಡೆಯುತ್ತಿದೆ. ವಿವಾಹ ಕಾರ್ಯಗಳೆಲ್ಲಾ ಆತ್ಮ ಜ್ಞಾನಕ್ಕೆ ಸಂಬಂಧಿಸಿರುವವೇಯೆಂದು ಮೊದಲೇ ಒಂದು ನಿಯಮವಿದೆ. ಆದ್ದರಿಂದ ಜೋಡಿ ಮದುಮಗನೂ ಸಹ ಆತ್ಮ ಜ್ಞಾನದಲ್ಲಿ ಅಂತರ್ಭಾಗವೇ ಎಂದು ತಿಳಿಯಬೇಕು. ವಿವಾಹ ಕಾರ್ಯದಲ್ಲಿ ಮದುಮಗ ಮಾಡುವ ಕೆಲಸಗಳನ್ನೆಲ್ಲ ನೋಡುತ್ತಾ ತಾನೇನೂ ಮಾಡದೆ ಪಕ್ಕದಲ್ಲಿ ಕುಳಿತುಕೊಳ್ಳುವುದೆ ಜೋಡಿ ಮದುಮಗನ ಕೆಲಸ. ಮದುಮಗ ಮಾಡುವ ಕೆಲಸಗಳನ್ನು, ಅವನು ಹೇಳುವ ಮಾತುಗಳನ್ನು (ಮಂತ್ರಗಳನ್ನು) ನೋಡುತ್ತಾ,

ಕೇಳುತ್ತಾ ಮೌನವಾಗಿ ಪಕ್ಕದಲ್ಲಿರುವುದೇ ಜೋಡಿ ಮದುಮಗನ ವಿಧಾನ. ಅರ್ಥವಿಲ್ಲದ ಕೆಲಸ ಮದುವೆ ಕಾರ್ಯಗಳಲ್ಲಿ ಇರುವುದಿಲ್ಲ. ಆದ್ದರಿಂದ ತಾನೂ ಸಹ ಮದುಮಗ ಅನಿಸಿಕೊಂಡ ಜೋಡಿ ಮದುಮಗ ಪಕ್ಕದಲ್ಲಿದ್ದು ಯಾವ ಒಂದು ಕಾರ್ಯವನ್ನು ಮಾಡದೆ ತಟಸ್ಥವಾಗಿರುವುದಕ್ಕೆ ಕಾರಣವೇನಾಗಿರುತ್ತದೊ ವಿವರಿಸಿ ನೋಡಿಕೊಳ್ಳೋಣ.

ಭೂಮಿ ಮೇಲೆ ಹುಟ್ಟಿದ ಪ್ರತಿಯೊಬ್ಬ ಮನುಷ್ಯನು ಮುಂಜಾನೆಯಿಂದ ಯಾವುದಾದರೊಂದು ಕೆಲಸ ಮಾಡುತ್ತಲೇ ಇರುತ್ತಾನೆ. ಒಬ್ಬ ಮನುಷ್ಯ ಎಂದರೆ ಶರೀರದಿಂದ ಸಜೀವವಾಗಿದ್ದಾನೆಂದು ಅರ್ಥ. ಮನುಷ್ಯನನ್ನು ವಿಭಜಿಸಿದರೆ ಶರೀರ ಬೇರೆ ಜೀವಿಯು ಬೇರೆ. ಒಬ್ಬ ಮನುಷ್ಯ ಕೆಲಸ ಮಾಡುತ್ತಿರುವಾಗ ಜೀವಾತ್ಮ ಮಾಡುತ್ತಿದ್ದಾನಾ, ಶರೀರ ಮಾಡುತ್ತಿದೆಯಾ ಎಂದು ಪರಿಶೀಲಿಸಿ ನೋಡಿದರೆ ಶರೀರವೆ ಕೆಲಸ ಮಾಡುತ್ತಿರುವ ಹಾಗೆ ಕಾಣಿಸುತ್ತದೆ. ಶರೀರ ಮಾಡುತ್ತಿರುವ ಕೆಲಸವನ್ನು ಜೀವಿಯು ಗಮನಿಸುತ್ತಾ ಆ ಕೆಲಸವನ್ನು ತಾನೇ ಮಾಡುತ್ತಿದ್ದೇನೆಂದು ಭ್ರಮಿಸುತ್ತಿದ್ದಾನೆ ಹೊರತು ತಾನು ಏನೂ ಮಾಡಲಿಲ್ಲ. ಇಲ್ಲಿ ಒಂದು ಪ್ರಶ್ನೆ ಬರಬಹುದು ಅದೇನೆಂದರೆ! ಕೆಲಸವನ್ನು ಶರೀರ ಮಾಡುತ್ತಿರುವಾಗ ಜೀವಾತ್ಮ ಇಲ್ಲದ ಶರೀರವು ಕೆಲಸ ಮಾಡುತ್ತಿದೆಯಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ ಜೀವಾತ್ಮ ಇಲ್ಲದ ಶರೀರಕ್ಕೆ ಕೆಲಸ ಮಾಡುವ ಅವಶ್ಯಕತೆಯೇ ಇಲ್ಲ. ಜೀವಾತ್ಮ ಇದ್ದಾಗ ಮಾತ್ರ ಶರೀರ ಕೆಲಸ ಮಾಡುತ್ತದೆ. ಹಾಗೆಂದು ಜೀವಾತ್ಮ ಕೆಲಸ ಮಾಡಲಿಲ್ಲ. ಹಾಗಿದ್ದಾಗ ಶರೀರವು ಸ್ವತಃವಾಗಿ ಕೆಲಸ ಮಾಡುತ್ತಿದೆಯಾ ಎನ್ನುವ ಸಂಶಯ ಸಹ ಬರಬಹುದು. ಅದಕ್ಕೆ ಉತ್ತರವಾಗಿ ಶರೀರವೂ ಸಹ ಸ್ವತಃವಾಗಿ ಕೆಲಸ ಮಾಡಲಿಲ್ಲವೆಂದು ಹೇಳಬಹುದು. ಶರೀರ ಕೇವಲ ಕೆಲಸ ಮಾಡುವ ಪರಿಕರವಿದ್ದಂತೆ ಆದರೆ ಸ್ವತಃವಾಗಿ ಕೆಲಸ ಮಾಡಲಿಲ್ಲ. ಶರೀರವು ಕೆಲಸ ಮಾಡುವಂತ್ತಾದಾದಾಗ, ಕೇವಲ ಜಡ ಪದಾರ್ಥ ಮಾತ್ರ ಆದಾಗ, ಜೀವಾತ್ಮ ಸಹ ಕೆಲಸ ಮಾಡದಿದ್ದಾಗ ನಡೆಯುತ್ತಿರುವ ಕೆಲಸವನ್ನು ಯಾರು ಮಾಡಿಸುತ್ತಿದ್ದಾರೆಂಬುದು ಮುಖ್ಯವಾದ ಪ್ರಶ್ನೆ ಆಗಬಹುದು.

ಶರೀರದಲ್ಲಿನ ಜೀವಾತ್ಮ ಕೇವಲ ಕಷ್ಟ ಸುಖಗಳನ್ನು ಅನುಭವಿಸುವುದಕ್ಕೇ ಇರುವಾಗ, ಶರೀರದಲ್ಲಿ ನಡೆಯುತ್ತಿರುವ ಕೆಲಸಗಳಿಗೆ ಜೀವಾತ್ಮದ ಶಕ್ತಿ ಯಾವ ಉಪಯೋಗವಾಗದಿರುವಾಗ, ಕೆಲಸಗಳನ್ನು ಮಾಡಲು ಜೀವಾತ್ಮನಿಗೆ ಶಕ್ತಿ ಸ್ವಲ್ಪವೂ ಸಹ ಇಲ್ಲದಿರುವಾಗ, ಶರೀರವು ಸಹ ಸ್ವತಃವಾಗಿ ಕೆಲಸ ಮಾಡದಿರುವಾಗ, ಇತ್ತ ಜೀವಾತ್ಮ ಅಲ್ಲದೆ, ಅತ್ತ ಶರೀರವೂ ಅಲ್ಲದೆ ಮತ್ಯಾರೋ ಇನ್ನೊಬ್ಬರು ಕೆಲಸಕ್ಕೆ ಕಾರಣವೆಂದು ಹೇಳಬಹುದು. ಸಜೀವ ಶರೀರದಲ್ಲಿ ಒಂದು ಜೀವಾತ್ಮ, ಎರಡು ಶರೀರವಲ್ಲದೆ ಮೂರನೆಯವನು ಎಲ್ಲಾ ಕೆಲಸಗಳು ನಡೆಯುವುದಕ್ಕೆ ಶಕ್ತಿಯುಳ್ಳವನೊಬ್ಬನಿದ್ದಾನೆ. ಅವನನ್ನೇ ಆತ್ಮ ಎನ್ನುತ್ತಿದ್ದೇವೆ. ಆತ್ಮ ಶರೀರದಲ್ಲಿ ನಿಕ್ಷಿಪ್ತವಾಗಿ ಯಾರಿಗೂ ತಿಳಿಯದಂತೆ ಇದೆ. ಕಾಣಿಸುವ ಶರೀರದಲ್ಲಿ ಕಾಣಿಸದ ಆತ್ಮ ಇದೆ. ಕಾಣಿಸದ ಆತ್ಮ ಹೊರಗೆ ಶರೀರವನ್ನು ಕದಲಿಸಿ ಕೆಲಸ ಮಾಡಿಸುತ್ತಿದೆ. ಶರೀರದಲ್ಲಿ ಚೈತನ್ಯ ಶಕ್ತಿಯಾಗಿದ್ದು ಯಾರಿಗೂ ತಿಳಿಯದ ಆತ್ಮವನ್ನು ತಿಳಿಸುವ ಉದ್ದೇಶವೇ **"ಜೋಡಿ ಮದುಮಗ"!** ನನ್ನು ತೋರಿಸುವುದು. ಮದುವೆ ಎಂದರೆ ದೈವವೆಂದು, ಮದುಮಗ ಎಂದರೆ ದೇವರ ಮಗನೆಂದು ವಿವರವಾಗಿ ತಿಳಿದು ಕೊಂಡಿದ್ದೇವೆ. ದೇವರು ಸರ್ವ ಜೀವರಾಶಿಗಳಿಗೂ ತಂದೆ ಎಂದು ಭಗವದ್ಗೀತೆಯ ಗುಣತ್ರಯ ವಿಭಾಗಯೋಗದಲ್ಲಿ ನಾಲ್ಕನೆಯ ಶ್ಲೋಕದಲ್ಲಿ **"ಸರ್ವಯೋನೀಷು ಕೌಂತೇಯ! ಮುರ್ತಯಃ ಸಂಭವಂತಿಯಾಃ, ತಾಸಾಂ ಬ್ರಹ್ಮ ಮಹದ್ಯೋನಿಃ ಅಹಂ ಬೀಜಪ್ರದಃ ಪಿತಾ"**. ಎಂದು ಹೇಳಿದ್ದಾನೆ. **ಯಾವ ಯೋನಿಯಲ್ಲಿ ಹುಟ್ಟಿದ ಜೀವರಾಶಿಗಾದರೂ ತಂದೆ ಪರಮಾತ್ಮ, ತಾಯಿ ಪ್ರಕೃತಿ ಎಂದು ಮೇಲಿನ ಶ್ಲೋಕದಲ್ಲಿ ತಿಳಿಯುತ್ತಿದೆ**. ಕಾಣಿಸುವ ವಿಶ್ವವೆಲ್ಲವನ್ನು ವಿಭಜಿಸಿ ನೋಡಿದರೆ, ಆತ್ಮಗಳು ಮೂರು, ಪ್ರಕೃತಿ ಒಂದು ಎಂದು ತಿಳಿಯುತ್ತಿದೆ. ಮೂರು ಆತ್ಮಗಳಲ್ಲಿ ಪರಮಾತ್ಮ ತಂದೆ ಸ್ಥಾನದಲ್ಲಿದ್ದು ಪ್ರಕೃತಿ ತಾಯಿ ಸ್ಥಾನದಲ್ಲಿ ಇದೆ. ಉಳಿದ ಎರಡು ಆತ್ಮಗಳು ಒಂದು ಜೀವಾತ್ಮವಾಗಿದ್ದು, ಎರಡನೆಯದು ಆತ್ಮವಾಗಿದೆ. ಜೀವಾತ್ಮನನ್ನೇನೊ ಪ್ರಕೃತಿ ಪುರುಷರಿಗೆ ಹುಟ್ಟಿದ ಕುಮಾರನಾಗಿ ಲೆಕ್ಕಿಸಿದ್ದೇವೆ. ವಿವರವಾಗಿ ಹೇಳಿ ಕೊಂಡರೆ ದೇವರ ಮಗನಾಗಿ, ಮದುಮಗನಾಗಿ ತಿಳಿದುಕೊಂಡಿದ್ದೇವೆ. ಜೀವಾತ್ಮ

ನಂತರ ಉಳಿದಿರುವುದು ಆತ್ಮ ಒಂದೇ. ಜೀವಾತ್ಮವನ್ನು ಮದುಮಗನೆಂದು ಹೇಳಿದರೆ ಆತ್ಮವನ್ನು ಏನೆಂದು ಹೇಳಬೇಕೊ ಪ್ರಶ್ನಿಸಿ ನೋಡಿಕೊಳ್ಳೋಣ.

ಜೀವಾತ್ಮ ಜನ್ಮಿಸುತ್ತಿದ್ದಾನೆಂದರೆ ಒಂದು ಶರೀರವನ್ನು ಸೇರಿ ಅದರಲ್ಲಿ ನಿವಾಸವಿರುತ್ತಾನೆ. ಹಾಗೆ ಸೇರಿದ ಶರೀರದಲ್ಲಿ ಎಷ್ಟು ಕಾಲ ಇರಬೇಕು? ಏನು ಮಾಡಬೇಕು? ಏನು ತಿನ್ನಬೇಕು? ಯಾವ ಯಾವ ಕಷ್ಟ ಸುಖಗಳನ್ನು ಅನುಭವಿಸಬೇಕು? ಯಾರ ಯಾರ ಹತ್ತಿರ ಸಂಬಂಧಪಟ್ಟಿರಬೇಕು? ಯಾವ ಯಾವ ಪ್ರಾಂತದಲ್ಲಿ ಇರಬೇಕು ಎನ್ನುವ ಮೊದಲಾದವುಗಳಿಗೆಲ್ಲ ಒಂದು ವಿವರಣೆ ಆ ಜೀವಾತ್ಮದ ಜೊತೆ ಬಂದಿರುತ್ತದೆ. ಅದು ಒಂದು ಲೆಕ್ಕಚಾರ ಮಾತ್ರವೆ, ಅದನ್ನೇ **"ಕರ್ಮ"** ಎನ್ನುತ್ತಿದ್ದೇವೆ. ಆ ಲೆಕ್ಕಚಾರ ಪ್ರಕಾರ ಜೀವಾತ್ಮ ಶರೀರವನ್ನು ನಡೆಸಲಾರನು, ಶರೀರವು ಸ್ವತಃ ನಡೆಯಲಾರದು. ಶರೀರದಲ್ಲಿ ಜೀವಾತ್ಮ ಶಕ್ತಿ ಇಲ್ಲದವನಾಗಿ ತಲೆಯಲ್ಲಿ ಒಂದು ಕಡೆ ಮಾತ್ರ ರವೆಯಷ್ಟು ದುಂಡನೆಯ ಆಕಾರದಿಂದ ಇದ್ದಾನೆ. ಶರೀರಕ್ಕೂ ಸಹ ಸ್ವತಃವಾಗಿ ಕದಲುವ ಶಕ್ತಿಯಿಲ್ಲ. ಶರೀರವು ಎಲ್ಲಾ ಕೆಲಸಗಳು ಮಾಡುವುದಕ್ಕೆ, ಕರ್ಮ ಎನ್ನುವ ಲೆಕ್ಕಚಾರದ ಪ್ರಕಾರ ಶರೀರವು ಕದಲಿ ಕೆಲಸ ಮಾಡಲು, ಶರೀರದ ಒಳಗಡೆ ಎಲ್ಲೋ ತಲೆಯಲ್ಲಿರುವ ಜೀವಾತ್ಮ ಸುಖಗಳನ್ನು ಅನುಭವಿಸುವುದಕ್ಕೆ ಆತ್ಮ ಕಾರಣವಾಗಿದೆ. ಆತ್ಮ ಶಕ್ತಿ ಸ್ವರೂಪವಾಗಿ ಶರೀರವನ್ನು ಕದಲಿಸುತ್ತಿದೆ. ಆದ್ದರಿಂದ ಆತ್ಮವನ್ನು ಚೈತನ್ಯಶಕ್ತಿ ಎನ್ನುತ್ತಿದ್ದೇವೆ. ಇತ್ತ ಶರೀರಕ್ಕೆ ಅತ್ತ ಜೀವಾತ್ಮಕ್ಕೆ ಆಧಾರವಾದ ಆತ್ಮ ಜೀವಾತ್ಮದ ಜೊತೆ ಶರೀರದಲ್ಲಿ ಇರುತ್ತದೆ. ಜೀವಾತ್ಮ ಎಲ್ಲಿರುತ್ತದೊ ಆತ್ಮ ಅಲ್ಲಿರುತ್ತದೆ. ಇದನ್ನನುಸರಿಸಿ ನೋಡಿದರೆ ಜೀವಿಯು ಇಲ್ಲದ ಶರೀರ ಇರಬಹುದು ಆದರೇ ಆತ್ಮವಿಲ್ಲದೆ ಜೀವಾತ್ಮ ಇರುವುದಿಲ್ಲ. ಒಂದು ಸಜೀವ ಶರೀರದಲ್ಲಿ ನಡೆಯುವ ಕೆಲಸಗಳೆಲ್ಲವೂ ಜೀವಿಗೋಸ್ಕರ ಆತ್ಮ ಮಾಡುತ್ತಿದ್ದಾನೆ. ಆತ್ಮ ಮಾಡುತ್ತಿದ್ದರೂ ಜೀವಿಯ ಅವಶ್ಯಕತೆಯ ನಿಮಿತ್ತವಾಗಿ ಮಾಡಲಾದ ಕೆಲಸಗಳಾದ್ದರಿಂದ ಜೀವಿಯೇ ಮಾಡುತ್ತಿದ್ದಾನೆಂದು ಎಲ್ಲರೂ ಅಂದುಕೊಳ್ಳುತ್ತಿದ್ದಾರೆ. ಜೀವಿಯು ಸಹ ತಾನೇ ಮಾಡುತ್ತಿದ್ದೇನೆಂದು ತಿಳಿಯುತ್ತಿದ್ದಾನೆ. ಆತ್ಮ ಮಾತ್ರ

ಎಲ್ಲಾ ಮಾಡುತ್ತಿದ್ದರೂ, ಶರೀರವೆಲ್ಲಾ ವ್ಯಾಪಿಸಿದ್ದರೂ ಹೊರಗಡೆಗೆ ಮಾತ್ರ ಯಾರಿಗೂ ತಿಳಿಯುತ್ತಿಲ್ಲ.

ಎಲ್ಲಾ ಕದಲಿಕೆಗಳನ್ನು ಕರ್ಮ ಪ್ರಕಾರ ಕದಲಿಸುವ ಆತ್ಮ ತಿಳಿಯದೆ ಹೋಗುವುದು, ಕೆಲಸಗಳಲ್ಲಿ ಸಂಬಂಧವಿಲ್ಲದ ಜೀವಾತ್ಮ ತಾನೇ ಕೆಲಸಗಳನ್ನು ಮಾಡುತ್ತಿರುವಂತೆ ತಿಳಿಯುತ್ತದೆ. ಜೀವಿಗಿರುವ ಅಜ್ಞಾನವೆಂದು ತಿಳಿಯಬೇಕು. ಜ್ಞಾನದ ಪ್ರಕಾರ ನಮಗೆ ತಿಳಿಯದಂತೆ ನಮ್ಮ ಪಕ್ಕದಲ್ಲೇ ಇರುವ ಆತ್ಮದ ವಿಷಯವನ್ನು ತಿಳಿಸುವುದೇ ಮದುವೆಯಲ್ಲಿ ಜೋಡಿ ಮದುಮಗನನ್ನು ಪಕ್ಕದಲ್ಲಿ ಕೂರಿಸಿ ತೋರಿಸುವುದೆಂದು ತಿಳಿಯಬೇಕು. ಜೀವಿಯು ಇಲ್ಲದ ದೇಹ ಇರಬಹುದಾಗಲಿ, ಆತ್ಮ ಇಲ್ಲದೆ ಜೀವಾತ್ಮವಿರುವುದಿಲ್ಲವೆಂದು ಮೊದಲೇ ಹೇಳಿದ್ದೇವೆ. ಜೀವಾತ್ಮ, ಆತ್ಮ ಎರಡೂ ಜೋಡಿ ಆತ್ಮಗಳಾಗಿವೆ. ಒಂದನ್ನು ಬಿಟ್ಟು ಒಂದು ಇರುವುದಿಲ್ಲ. ಮರಣದಲ್ಲಿ ಶರೀರವನ್ನು ಬಿಟ್ಟಾಗ, ಜನ್ಮದಲ್ಲಿ ಶರೀರವನ್ನು ಧರಿಸಿದಾಗ ಎರಡೂ ಆತ್ಮಗಳು ಜೋಡಿಯಾಗಿ ಪ್ರಯಾಣಿಸುತ್ತಿವೆ. ಅನುಭವಿಸಲು ಜೀವಾತ್ಮ, ಅನುಭವಿಸುವಂತೆ ಮಾಡಲು ಆತ್ಮ ಶರೀರದಲ್ಲಿವೆ. ಆದ್ದರಿಂದ ಸಾವು ಹುಟ್ಟುಗಳೆರಡು ಜೀವಾತ್ಮ ಆತ್ಮಗಳಿಂದಲೇ ನಡೆಯುತ್ತಿವೆ. ಜೀವಾತ್ಮಗೋಸ್ಕರವೇ ಆತ್ಮವನ್ನು ದೇವರು ಸೃಷ್ಠಿಸಿದ್ದಾನೆ. ಸೃಷ್ಠಿಯಲ್ಲಿರುವ ಪ್ರತಿ ಜೀವಿಗೂ ಒಂದು ಆತ್ಮವನ್ನು ಜೊತೆಯಾಗಿ ಇಟ್ಟಿದ್ದಾನೆ. **ಜೀವಾತ್ಮ ಆತ್ಮಗಳನ್ನು ಭಗವದ್ಗೀತೆಯಲ್ಲಿ ಕ್ಷರನು ಅಕ್ಷರನು ಅಂದಿದ್ದಾರೆ. ಕ್ಷರಾಕ್ಷರರಿಬ್ಬರೂ ಕೂಟಸ್ಥರಾಗಿ ಶರೀರದಲ್ಲಿ ಇದ್ದಾರೆಂದೂ ಸಹ ತಿಳಿಸಿದ್ದಾರೆ.** ಕ್ಷರ ಪುರುಷನಾದ ಜೀವಾತ್ಮ, ಅಕ್ಷರ ಪುರುಷನಾದ ಆತ್ಮ ಪುರುಷೋತ್ತಮನಾದ ಪರಮಾತ್ಮನಿಗೆ ಹುಟ್ಟಿದವರೆಂದು ಹೇಳಬಹುದು. ಆದ್ದರಿಂದ ಜೀವಾತ್ಮವನ್ನು ಮದುಮಗ ಎಂದಾಗ ಆತ್ಮವನ್ನು ಜೋಡಿ ಮದುಮಗ ಎಂದು ಕರೆಯಬೇಕಾಗಿದೆ. ಜೀವಾತ್ಮದ ಜೋಡಿ ಆತ್ಮ ಎಂಬುವುದೊಂದು ಇದೆಯೆಂದು ತಿಳಿಸುವಸಲುವಾಗಿ ಮದುವೆ ಯಲ್ಲಿ ಮದುಮಗನ ಪಕ್ಕದಲ್ಲಿ ಜೋಡಿ ಮದುಮಗನನ್ನು ಕೂರಿಸುತ್ತಿದ್ದಾರೆ.

ಜೋಡಿ ಮದುಮಗನಿಲ್ಲದ ಮದುವೆ ಪೂರ್ವಕಾಲದಲ್ಲಿ ಮಾಡುತ್ತಿರಲಿಲ್ಲ. ಮದುವೆ ಕಾರ್ಯವೆಲ್ಲವೂ ಅಜ್ಞಾನಿಗಳಿಗೆ ಜ್ಞಾನ ತಿಳಿಸುವಸಲುವಾಗಿ ತೀರ್ಚಿತಿದ್ದಲ್ಪಟ್ಟ ತಂತುಗಳಿಂದ ತುಂಬಿರುವುದು. ಆದ್ದರಿಂದ ಶಾಸ್ತ್ರಬದ್ಧವಾಗಿ ಧರ್ಮಬದ್ಧವಾಗಿ ಮಾಡುವ ಮದುವೆ ಕಾರ್ಯಗಳಲ್ಲಿ ಮಧುಮಗನ ಜೊತೆಯಲ್ಲಿ ಜೋಡಿ ಮದುಮಗ ಇದ್ದೇ ಇರಬೇಕು. ಮದುವೆಯಲ್ಲಿ ಮದುಮಗನಿಂದಲೇ ಕಾರ್ಯಗಳೆಲ್ಲಾ ಮಾಡಿಸಿದರೂ ಇವುಗಳಿಗೆಲ್ಲ ಹಿಂದೆ ಆತ್ಮ ಇದೆಯೆಂದು ತಿಳಿಸಲು ಜೋಡಿಮದುಮಗನಾಗಿ ಒಬ್ಬ ವ್ಯಕ್ತಿಯನ್ನು ತೋರಿಸುವುದು ಧರ್ಮಯುಕ್ತವಾದ ಕೆಲಸ. ಜೀವಾತ್ಮದೊಂದಿಗೆ ಹುಟ್ಟುತ್ತಿದೆ, ಜೀವಾತ್ಮದೊಂದಿಗೆ ಸಾಯುತ್ತಿದೆ, ಆದ್ದರಿಂದ ಆತ್ಮ ಯಾವಾಗಲೂ ಜೊತೆಯಾಗಿದೆಯೆಂದು ತಿಳಿಸುವುದಕ್ಕೆ **"ಜೋಡಿ"** ಎಂದು ಹೇಳುವುದು ನಡೆದಿದೆ. ಪರಮಾತ್ಮನಿಂದ ಜೀವಾತ್ಮದ ಜೊತೆ ಆತ್ಮ ಹುಟ್ಟಿದೆಯಾದ್ದರಿಂದ ದೇವರಿಗೆ ಜೀವಾತ್ಮ, ಆತ್ಮ ಇಬ್ಬರೂ ಕುಮಾರರೇ ಎಂದು ಹೇಳಬಹುದು. ಇದನ್ನನುಸರಿಸಿ ನೋಡಿದಾಗ ಜೀವಾತ್ಮ ಮದುಮಗ ಆದಾಗ ಆತ್ಮ ಸಹ ಮದುಮಗನೆ ಆಗುವನು. ಆದ್ದರಿಂದ ಆತ್ಮವನ್ನು ಜೋಡಿ ಮದುಮಗ ಎಂದು ಕರೆಯುತ್ತಾರೆ. ಜೀವಾತ್ಮ ಆತ್ಮಗಳ ಇರುವಿಕೆಯನ್ನು ತಿಳಿಸುವುದಕ್ಕೆ ಜೀವಾತ್ಮವನ್ನು ಮದುಮಗ ಎಂದು ಹೇಳುತ್ತಾ ಒಬ್ಬ ಮನುಷ್ಯನನ್ನು, ಆತ್ಮವನ್ನು ಜೋಡಿಮದುಮಗನೆಂದು ಎರಡನೇ ಮನುಷ್ಯನನ್ನು ವಿವಾಹ ಕಾರ್ಯದಲ್ಲಿ ತೋರಿಸುತ್ತಿದ್ದೇವೆ.



# ಖಡ್ಗ

ಯಾವ ದಿನವಾದರೆ ಮಧುಮಗನನ್ನು ಮಾಡಿ ನೀನು ದೈವಪುತ್ರನೆಂದು ತಿಳಿಸುತ್ತಿದ್ದಾರೋ ಆ ದಿನದಿಂದ ನೀನು ಪ್ರತ್ಯೇಕಿಸಿ ಒಬ್ಬರೊಂದಿಗೆ ಯುದ್ಧ ಮಾಡಬೇಕೆಂದು ತಿಳಿಯುವಂತೆ ಖಡ್ಗವನ್ನು ಕೈಗೆ ಕೊಡುತ್ತಿದ್ದಾರೆ. ಅಜ್ಞಾನದಿಂದ ದೈವಮಾರ್ಗವನ್ನು ಪ್ರವೇಶಿಸಿದವರು ಮಾಯೆಯೊಂದಿಗೆ ಹೋರಾಡಬೇಕಾಗಿದೆ

ಎಂದು, ಇಂದಿನಿಂದ ಮಾಯೆಯೇ ನಿನಗೆ ದೊಡ್ಡ ಶತ್ರುವೆಂದು, ಅದು ಅನೇಕ ರೂಪಗಳಿಂದ ಇರುವುದೆಂದು, ಅದರೊಂದಿಗೆ ಹೋರಾಡಿ ಜಯಿಸಲು ಯಾವಾಗಲೂ ಸೈನಿಕನಂತೆ ಇರಬೇಕೆಂದು ಭೋಧಿಸಿ ಅದೇ ಅರ್ಥ ಕೊಡುವಂತೆ ಮದುಮಗನಿಗೆ ಖಡ್ಗ ಕೊಟ್ಟಿದ್ದಾರೆ. ಪೂರ್ವಕಾಲದಲ್ಲಿ ದೊಡ್ಡ ಖಡ್ಗವನ್ನು ಕೊಟ್ಟು ಸೈನಿಕನಂತೆ ಕಾಣಿಸುವಂತೆ ದೊಡ್ಡವರು ಮಾಡುತ್ತಿದ್ದರೆ ಕಾಲಕ್ರಮದಲ್ಲಿ ಬದಲಾವಣೆಯಾಗುತ್ತಾ ಬಂದು ಈ ದಿನ ಸಣ್ಣ ಕತ್ತಿಯನ್ನು ಕೈಗೆ ಕೊಡುತ್ತಿದ್ದಾರೆ. ಆ ಸಾಂಪ್ರದಾಯ ಪೂರ್ತಿ ಮಾಸಿ ಹೋಗದಂತೆ ಸ್ವಲ್ಪ ಸಣ್ಣ ಕತ್ತಿಯವರಿಗಾದರೂ ಉಳಿದಿರುವುದಕ್ಕೆ ನಾವು ಸಂತೋಷಿಸಬೇಕಾಗಿದೆ. ಪೂರ್ವ ಕಾಲದಲ್ಲಿ ಆಚರಣೆಗೆ ಅರ್ಥತಿಳಿದು ಮಾಡುತ್ತಿದ್ದರು. ಈ ದಿನ ಆ ಅರ್ಥ ಬದಲಾಗಿಹೋಗಿದೆ. ಆಚರಣೆ ಮಾತ್ರ ಸ್ವಲ್ಪ ಉಳಿದುಕೊಂಡಿದೆ. ಪ್ರತ್ಯೇಕಿಸಿ ಅರಿಶಿಣದ ಬಟ್ಟೆಗಳನ್ನು ತೊಟ್ಟು ಅರಿಶಿಣ ಬಳಿದುಕೊಂಡು ನಾನು ಪವಿತ್ರನೆಂಬುವಂತೆ ಕಾಣಿಸುವ ಮಧುಮಗನಾದರೂ ತನಗೆ ತಾನಾಗಿ ನಾನು ಯಾರ ಮಗನು, ನನಗಿರುವ ಪವಿತ್ರತೆ ಏನೆಂದು ಯೋಚಿಸುವುದಿಲ್ಲ. ಹಾಗೆಯೇ ಸಣ್ಣ ಕತ್ತಿಯನ್ನು ಕೈಯಲ್ಲಿ ಹಿಡಿದ ಮದುಮಗನು ನಾನು ಯಾರ ಮೇಲೆ ಯುದ್ಧ ಮಾಡಬೇಕೆಂದು ಕೊಳ್ಳುವುದಿಲ್ಲ. ಈ ವಿಧವಾಗಿ ಇಂದಿನಿಂದ ಅರ್ಥರಹಿತರಾಗಿರದೆ, ಅರ್ಥ ಸಹಿತರಾಗಿ ಆಚರಣೆಯನ್ನು ಅರ್ಥದಿಂದ ಪೂರ್ತಿಮಾಡಿಸಿ. ಈ ವಿಷಯವನ್ನು ತಿಳಿದ ನೀವು ಮದುವೆಯ ದಿನದಂದು ಮದುಮಗನಿಗು, ಮದುಮಗಳಿಗು ತಂದೆಯಾದ ಪರಮಪಿತ ಒಬ್ಬನೇ ಎಂದು ತಿಳಿಸಿರಿ. ಹಾಗೆಯೇ ಮದುಮಗನಿಗೆ ಬಾಹ್ಯವಾಗಿ ಕತ್ತಿಯನ್ನು ಕೊಡುವುದಲ್ಲದೆ ಅಂತರಂಗದಲ್ಲಿ ಜ್ಞಾನವೆಂಬ ದೊಡ್ಡ ಖಡ್ಗವನ್ನು ಕೊಟ್ಟು ಆತನನ್ನು ಮಾಯೆಯೊಂದಿಗೆ ಹೋರಾಡುವ ಸೈನಿಕನಂತೆ ಸಿದ್ಧಪಡಿಸಿರಿ.



# ಭಾಸಿಂಗ

ಮದು ಮಗನನ್ನಾಗಲಿ, ಮದುಮಗಳನ್ನಾಗಲಿ ಮಾಡಿದ ಕೂಡಲೇ ಅವರ ತಲೆಗೆ ಹಣೆಯ ಭಾಗದಲ್ಲಿ ಅಕ್ಕಿಯಿಂದ ಪೋಣಿಸಲ್ಪಟ್ಟ ಭಾಸಿಂಗಗಳನ್ನು ಕಟ್ಟುವ ಸಾಂಪ್ರದಾಯವಿದೆ. ಕಾಲಕ್ರಮೇಣ ಅವುಗಳಲ್ಲಿಯೂ ಸಹ ಬದಲಾವಣೆಗಳು ಬಂದು ಈ ಕಾಲದಲ್ಲಿ ಭಾಸಿಂಗಗಳನ್ನು ಅಕ್ಕಿಯಿಂದ ತಯಾರು ಮಾಡಿದವುಗಳಲ್ಲದೆ ಬೇರೆ ವಿಧಗಳಾಗಿಯೂ ಸಹ ತಯಾರಾಗಿವೆ. ಅವುಗಳಲ್ಲಿ ಸ್ವಲ್ಪ ಬದಲಾವಣೆಗಳು ಬಂದರೂ ಕೆಲವು ಕಡೆಗಳಲ್ಲಾದರೂ ಅಕ್ಕಿಯಿಂದ ಮಾಡಿದ ಭಾಸಿಂಗಗಳಿರುವುದು ಸಂತೋಷ. ಇಂತಹ ಸ್ಥಿತಿಯಲ್ಲಿ ಅವುಗಳನ್ನು ಕುರಿತು ತಿಳಿದಿಕೊಳ್ಳುವುದು ಮುಖ್ಯ. ಪೂರ್ವಕಾಲದಲ್ಲಿ ಯಾವ ಉದ್ದೇಶದಿಂದ ಭಾಷಿಂಗಗಳನ್ನು ಹಿರಿಯರು ಇಟ್ಟಿದ್ದಾರೆಂದರೆ!

ನಮ್ಮ ಶರೀರದಲ್ಲಿ ಏಳು ಮುಖ್ಯವಾದ ನಾಡಿಕೇಂದ್ರಗಳು ಇವೆ. ಅವು ಬೆನ್ನುಮೂಳೆಯ ಕೆಳಗಿನ ಭಾಗದಿಂದ ಶಿರಸ್ಸಿನವರೆಗೂ ಬೆನ್ನು ಮೂಳೆಯ ಮೂಲಕ ವ್ಯಾಪಿಸಿದ ನರದಲ್ಲಿ ಇವೆ. ಬ್ರಹ್ಮನಾಡಿ ಎಂದು ಕರೆಯುವ ಆ ನಾಡಿಯಲ್ಲಿ ಮೇಲಿರುವ ಎರಡು ಕೇಂದ್ರಗಳು ಬಹಳ ಪ್ರಮುಖವಾದವು. ಕಣ್ಣುಬ್ಬುಗಳ ಮಧ್ಯದಲ್ಲಿರುವ ನಾಡೀ ಕೇಂದ್ರವನ್ನು ಭ್ರೂಮಧ್ಯ ಸ್ಥಾನವೆಂದು, ಹಾಗೆಯೇ ಕೊನೆಯ ಮೇಲಿರುವ ಕೇಂದ್ರವನ್ನು ಸಹಸ್ರಾರವೆಂದು ಆಧ್ಯಾತ್ಮಿಕದಲ್ಲಿ ಹೇಳಲ್ಪಡುತ್ತಿವೆ. ಜ್ಞಾನ ದೃಷ್ಟಿ ಉಂಟಾಗಲು ಭ್ರೂಮಧ್ಯ ಸ್ಥಾನವು, ಜ್ಞಾನ ಮತ್ತು ಜ್ಞಾನಶಕ್ತಿ ನೆಲೆ ಇರಲು ಸಹಸ್ರಾರವು ಯೋಗ್ಯತೆ ಹೊಂದಿವೆ. ಕಣ್ಣುಬ್ಬುಗಳ ಮಧ್ಯದಲ್ಲಿರುವ ನಾಡೀ ಕೇಂದ್ರವು ಜ್ಞಾನದೃಷ್ಠಿಗೆ ಕೇಂದ್ರವಾಗಿ, ಭೂಮಿಯ ಮೇಲೆ ಧಾನ್ಯಗಳಲ್ಲಿ ಅಕ್ಕಿ ಜ್ಞಾನಕ್ಕೆ ಗುರುತು ಇರುವವಾಗಿ  ಜ್ಞಾನ ಚಿಹ್ನೆಗಳಾಗಿ ಇವೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಅಧಿಪತಿ ಚಂದ್ರ, ಚಂದ್ರನ ಧಾನ್ಯ ಅಕ್ಕಿ. ಚಂದ್ರನನ್ನು ಮತ್ತು ಅಕ್ಕಿಯನ್ನು ಜ್ಞಾನ ಚಿಹ್ನೆಗಳಾಗಿ ಆಧ್ಯಾತಿಕದಲ್ಲಿಯೂ ಸಹ ಹೇಳುತ್ತಿದ್ದೇವೆ. ಇಲ್ಲಿ ಭಾಸಿಂಗಗಳಾಗಿ ಅಕ್ಕಿಯನ್ನು ಜೋಡಿಸಿ ಕಟ್ಟುವುದು ಗಮನಾರ್ಹವಾಗಿದೆ.

ಜೀವನದಲ್ಲಿ ಯುಕ್ತ ವಯಸ್ಸು ಬರುವವರೆಗೂ ಜ್ಞಾನ ದೃಷ್ಟಿ ಇಲ್ಲದ ಯುವಕರು ಉಪನಯನ ಉಪದೇಶಗಳು ಹೊಂದದಿದ್ದರೂ, ಆ ಮದುವೆಯ ದಿನದಿಂದ ಜ್ಞಾನದೃಷ್ಟಿಯಿಂದಿರಬೇಕೆಂದು ಸೂಚನೆ ಮಾಡುತ್ತಾ ಅಕ್ಕಿಯಿಂದ ತಯಾರುಮಾಡಿದ ಅದೂ ಭತ್ತವನ್ನು ಕೈಯಿಂದ ಸುಲಿದ ಅಕ್ಕಿಯಿಂದಲೇ ತಯಾರು ಮಾಡಿದ ಭಾಸಿಂಗವನ್ನೇ ಕಟ್ಟುತ್ತಿದ್ದರು. ಕೈಯಿಂದ ಮಾಡಿದ ನೂಲಿನಿಂದ ಮೂರು ಸಾಲುಗಳಾಗಿ ಅಕ್ಕಿಯನ್ನು ಪೋಣಿಸಿ ಕಟ್ಟಿರುವವುಗಳನ್ನೇ ಪೂರ್ವದಲ್ಲಿ ವಧುವರರಿಗೆ ಹಣೆಯ ಮೇಲೆ ಭ್ರೂಮಧ್ಯ ಸ್ಥಾನಕ್ಕೆ ಹತ್ತಿರವಾಗಿ ಕಟ್ಟುತ್ತಿದ್ದರು. ಮದುವೆಯ ದಿನದಿಂದ ಜ್ಞಾನದೃಷ್ಟಿಯಿಂದಿರಬೇಕೆಂದು ಜ್ಞಾನವನ್ನು ಸ್ವಲ್ಪ ಬೋಧಿಸಿ ಭಾಷಿಂಗವನ್ನು ಧರಿಸುವಂತೆ ಮಾಡುತ್ತಿದ್ದರು. **ಜ್ಞಾನನೇತ್ರ ಪ್ರಕಾಶಿಸುವ ಸ್ಥಾನದಲ್ಲಿ ಧರಿಸಲ್ಪಡುವುದರಿಂದ ಅದನ್ನೇ ಪ್ರಕಾಶ ನೇತ್ರ ಎನ್ನುತ್ತಿದ್ದರು.** ಪೂರ್ವದಲ್ಲಿ ಸತ್ ಸಾಂಪ್ರದಾಯ ರೀತಿಯಲ್ಲಿ ಅದನ್ನೇ ಪ್ರಕಾಶಾಂಗ ಎನ್ನುತ್ತಿದ್ದರು. ಕೊನೆಗದು ಭಾಸಿಂಗವಾಗಿ ಉಳಿದುಕೊಂಡಿದೆ. ಭಾಷಿಸುವುದಾದ್ದ ರಿಂದ ಭಾಸಿಂಗವೆಂದು ಸಹ ಹೇಳುತ್ತಿದ್ದಾರೆ. ರೂಪದಲ್ಲಿಯೂ, ಹೆಸರಿನಲ್ಲಿಯೂ ಸ್ವಲ್ಪ ಬದಲಾಗಿದ್ದರೂ ಸಾಂಪ್ರದಾಯದ ಗುರುತಾಗಿ ಉಳಿದಿರುವುದಕ್ಕೆ ನಾವು ಸಂತೋಷಿಸಬೇಕು. ಅಷ್ಟಕ್ಕೆ ತೃಪ್ತಿ ಪಡದೆ ಸಾಂಪ್ರದಾಯ ರೀತಿಯಿಂದ ಇಲ್ಲಿಂದ ಅಕ್ಕಿಯನ್ನೇ ಭಾಸಿಂಗಗಳಾಗಿ ಬಳಸುವುದಕ್ಕೆ ಪ್ರಯತ್ನಿಸೋಣ. ಪೂರ್ವಕಾಲದ ಧರ್ಮವನ್ನು ಆಚರಿಸೋಣ. ಜ್ಞಾನನೇತ್ರವನ್ನು ಹೊಂದಿರೋಣ.



# ಕೆನ್ನೆ ಬೊಟ್ಟು (ಚುಕ್ಕೆ ಬೊಟ್ಟು)

ಮದುವೆ ಕಾರ್ಯದಲ್ಲಿ ಮದುಮಗನ ಮದುಮಗಳ ಮುಖದವೊಂದು ಕೆನ್ನೆಯ ಮೇಲೆ ಕಪ್ಪನೆಯ ಚುಕ್ಕೆ ಬೊಟ್ಟನ್ನು ಇಡುತ್ತಿದ್ದರು. ಅದರ ವಿವರ ತಿಳಿಯದಿದ್ದರೂ ಹಾಗೆ ಇಡುವುದು ಅಭ್ಯಾಸವಾಗಿಹೋಗಿದೆ. ಕೆನ್ನೆಯ ಮೇಲೆ ಬೊಟ್ಟನ್ನು ಈ ಕಾಲದಲ್ಲಿ ದೃಷ್ಟಿ ಬೊಟ್ಟು ಎಂದು ಅದನ್ನು ಹಿಡುವುದರಿಂದ

ವಧೂವರರಿಗೆ ಯಾರ ದೃಷ್ಠಿ ತಗಲುವುದಿಲ್ಲವೆಂದು ಸಹ ಕೆಲವರು ಹೇಳುತ್ತಾರೆ. ಆದ್ದರಿಂದ ಇದನ್ನು ದೃಷ್ಠಿಬೊಟ್ಟು ಎಂದು ಕೆಲವರು, ಜಿಷ್ಠಿಬೊಟ್ಟು ಎಂದು ಕೆಲವರು ಎನ್ನುತ್ತಿದ್ದಾರೆ. ಈ ಕಾಲದಲ್ಲಿ ಕೆನ್ನೆ ಮೇಲಿನ ಬೊಟ್ಟನ್ನು ಕುರಿತು ಯಾರೇನಂದುಕೊಂಡರೂ ಅದು ಪೂರ್ವದಿಂದ ಬಂದ ಆಚರಣೆ ಎಂದು ಹೇಳಬಹುದು. ಪೂರ್ವಕಾಲದಲ್ಲಿ ಇದನ್ನು ದೃಷ್ಠಿ ಬೊಟ್ಟು ಎಂದಾಗಲಿ, ಜಿಷ್ಠಿ ಬೊಟ್ಟು ಎಂದಾಗಲಿ ಎನ್ನುತ್ತಿರಲಿಲ್ಲ. ಪೂರ್ವದಲ್ಲಿ ಅರ್ಥದಿಂದ ಕೂಡಿಕೊಂಡ ವಿಧಾನ ತಿಳಿಸುವುದಕ್ಕೆ ಆ ವಿಧವಾಗಿ ಕೆನ್ನೆಯ ಮೇಲೆ ಬೊಟ್ಟನ್ನು ಇಡುತ್ತಿದ್ದರು. ದೃಷ್ಠಿದೋಷ ನಿವಾರಣೆಗೆ ಇಡುವ ಬೊಟ್ಟು ಅಲ್ಲ ಆದ್ದರಿಂದ ಅದನ್ನು ದೃಷ್ಠಿ ಬೊಟ್ಟು ಎನ್ನುತ್ತಿರಲಿಲ್ಲ. ಮದುವೆ ಕಾರ್ಯಗಳೆಲ್ಲಾ ದೈವ ಜ್ಞಾನವನ್ನು ಬೋಧಿಸುವವೆಯೆಂಬ ನಿಯಮದ ಪ್ರಕಾರ ಕೆನ್ನೆಯ ಮೇಲೆ ಬೊಟ್ಟು ಸಹ ಜ್ಞಾನಕ್ಕೆ ಸಂಬಂಧಿಸಿದ ಆಚರಣೆ ಎಂದು ತಿಳಿಯಬೇಕು. ಕೆನ್ನೆಯ ಮೇಲೆ ಇಡುವ ಚುಕ್ಕೆಬೊಟ್ಟನ್ನು ನೋಡುವುದರಿಂದ ನೋಡಿದವರು ತಿಳಿದುಕೊಳ್ಳಬೇಕಾದ ಜ್ಞಾನವೇನೋ ತಿಳಿದುಕೊಳ್ಳೋಣ.

ಮನುಷ್ಯ ಶಿಶುವಾಗಿ ಹುಟ್ಟುತ್ತಿದ್ದಾನೆ. ಹುಟ್ಟಿದ ಪ್ರತಿ ಶಿಶುವನ್ನೂ ದೇವರು ಗುರುತು ಇಟ್ಟುಕೊಳ್ಳುತ್ತಿದ್ದಾನೆ. ಹುಟ್ಟಿದ ಪ್ರತಿ ಶಿಶು ಶರೀರವು ದೇವರ ನಿಲಯವಾಗಿದೆ. ಶರೀರವು ಪ್ರಕೃತಿ ಸಂಬಂಧವೇ ಆದರೂ ಶರೀದಲ್ಲಿ ಪರಮಾತ್ಮ, ಆತ್ಮ, ಜೀವಾತ್ಮ ಮೂವರೂ ಇದ್ದಾರೆ. ಪರಮಾತ್ಮ ವಿಶಾಲವಾದವನಾದರೂ ಶರೀರದಲ್ಲಿ ಸಹ ಇದ್ದಾನಾದ್ದರಿಂದ **"ಮತ್ ಸ್ಥಾನಿ ಸರ್ವಭುತಾನಿ"** ಎಂದು ಭಗವದ್ಗೀತೆಯಲ್ಲಿ ರಾಜವಿದ್ಯೆ ರಾಜಗುಹ್ಯ ಯೋಗದ ನಾಲ್ಕನೇ ಶ್ಲೋಕದಲ್ಲಿ ಹೇಳಿದ್ದಾನೆ. **"ಮತ್"** ಎಂದರೆ ನನ್ನೊಂದರ ಎಂದು, ಸ್ಥಾನಿ ಎಂದರೆ ಸ್ಥಾನ ಎಂದು ಅರ್ಥ. ಪರಮಾತ್ಮ ವಿಶಾಲವಾಗಿದ್ದಾನೆ ಮತ್ತು ಎಲ್ಲ ಜೀವರಾಶಿಗಳೂ ಪರಮಾತ್ಮನಲ್ಲಿವೆ. ಹಾಗೆಯೇ ಪರಮಾತ್ಮ ಎಲ್ಲಾ ಶರೀರಗಳಲ್ಲಿಯೂ ಸಹ ಇದ್ದಾನಾದ್ದರಿಂದ ಆತನು ಎಲ್ಲರಲ್ಲಿದ್ದಾನೆಂದು ಹೇಳಬಹುದು. ಇದರಿಂದ ಪ್ರತಿ ಶರೀರವೂ ದೇವರಿಂದ ಗುರುತಿಸಲ್ಪಟ್ಟಿದೆ ಎಂದು, ಆತನ ದೃಷ್ಠಿಯಲ್ಲಿ

ಎಲ್ಲರೂ ಇದ್ದಾರೆಂದು ಹೇಳಬಹುದು. ಈ ವಿಷಯವನ್ನು ಪ್ರತಿ ಮನುಷ್ಯ ಗ್ರಹಿಸುವಂತೆ ಪ್ರತಿ ಮನುಷ್ಯನ ಶರೀರದ ಮೇಲೆ ಹುಟ್ಟಿನಿಂದಲೇ ಒಂದು **"ಮತ್‌ಸ್ಥಾ"**ವನ್ನು ಇಟ್ಟಿದ್ದಾನೆ. ಕಾಲಕ್ರಮವಾಗಿ **"ಮತ್‌ಸ್ಥಾ"** ಎಂಬ ಪದವನ್ನು **"ಮತ್ಸ"** ಎನ್ನುವ ಪದವಾಗಿ ಹೇಳುತ್ತಿದ್ದೇವೆ. ಶರೀರದ ಮೇಲೆ ಕಪ್ಪು ಮತ್‌ಸ್ಥಾನಗಳನ್ನು ಹುಟ್ಟಿದಾಗಲೇ ನೋಡಬಹುದು. ಶರೀರದ ಮೇಲೆ ಹುಟ್ಟಿನಿಂದಲೇ ಎಲ್ಲೋ ಒಂದು ಕಡೆ ಇರುವ **"ಮತ್‌ಸ್ಥಾನವನ್ನು ಹುಟ್ಟು ಮತ್ಸ"** ಎಂದು ಅನ್ನುವುದು ನಡೆಯುತ್ತಿದೆ. ಹುಟ್ಟಿನಿಂದಲೇ ಮತ್ಸ ಹುಟ್ಟಬೇಕಾದ ಅವಶ್ಯಕತೆ ಏನಿದೆಯೆಂದು ಯಾರೂ ಆಲೋಚಿಸುತ್ತಿಲ್ಲ. ಹುಟ್ಟು ಮತ್ಸ ಶರೀರದ ಮೇಲೆ ಹುಟ್ಟಿನಿಂದ ಇರುವುದರಿಂದ ನೀನು ಹುಟ್ಟಿದಾಗಲೇ ನನ್ನಿಂದ ಗುರುತಿಸಲ್ಪಟ್ಟಿದ್ದೀಯ ಎಂದು ದೇವರು ತಿಳಿಸಿದಂತೆ ತಿಳಿಯುತ್ತಿದೆ. ಪ್ರತಿಯೊಬ್ಬರು ದೇವರ ಸ್ಥಾನವಾಗಿ ಇದ್ದಾರೆಂದು ತಿಳಿಸಲ್ಪಡುವ ಗುರುತೇ **"ಮತ್ಸ"** ಎಂದು ಹೇಳಬಹುದು. ಹುಟ್ಟಿದಾಗ ಹುಟ್ಟು ಮತ್ಸವೆ (ಮಚ್ಚೆ) ಅಲ್ಲದೆ ನಂತರ ಜೀವನ ಕಾಲದಲ್ಲಿ ಶರೀರದ ಮೇಲೆ ಚಿಕ್ಕ ಚಿಕ್ಕ ಮತ್ಸ (ಮಚ್ಚೆ) ಗಳು ಬರುತ್ತಿರುತ್ತವೆ. ಇದರಿಂದ ಹುಟ್ಟಿದಾಗ, ಹುಟ್ಟಿದ ನಂತರ ಎಂದಿಗೂ ನಿನ್ನ ಶರೀರವು ನನ್ನ ಅಧೀನದಲ್ಲಿದೆ ಎಂದು, ನೀನು ನನ್ನಿಂದ ಗುರುತಿಸಲ್ಪಟ್ಟಿದ್ದೀಯ ಎಂದು ತಿಳಿಸುವ ಸಲುವಾಗಿಯೇ ಎಂದು ತಿಳಿಯುತ್ತಿದೆ.

ಹುಟ್ಟಿದ ಸ್ತ್ರೀ ಶರೀರವಾಗಲಿ, ಪುರುಷನ ಶರೀರವಾಗಲಿ ಮತ್ಸಗಳು (ಮಚ್ಚೆಗಳು) ಹೊಂದಿದ್ದು ದೇವರ ಇರುವಿಕೆಯನ್ನು ತಿಳಿಸುತ್ತಿವೆ. ಈ ವಿಷಯವನ್ನು ತಿಳಿಸುವ ಸಲುವಾಗಿ, ಪೂರ್ವದಲ್ಲಿ ದೈವಜ್ಞಾನ ತಿಳಿದ ಹಿರಿಯರು ಮದುವೆ ಕಾರ್ಯಗಳಲ್ಲಿ, ಮದುಮಗಳು, ಮದುಮಗನ ಮುಖದ ಮೇಲೆ ಪ್ರತ್ಯೇಕವಾಗಿ ಕಾಣಿಸುವಂತೆ ಕೆನ್ನೆಯ ಮೇಲೆ ಕಪ್ಪು ಬೊಟ್ಟನ್ನು ಇಡುತ್ತಿದ್ದರು. **ಮದುಮಗನಿಗೆ ಬಲಗಡೆ ಕೆನ್ನೆಯ ಮೇಲೆ ಕಪ್ಪನೆಯ ಚುಕ್ಕೆ ಬೊಟ್ಟು ಇಟ್ಟು, ಮದುಮಗಳಿಗೆ ಎಡಗಡೆಯ ಕೆನ್ನೆಯ ಮೇಲೆ ಕಪ್ಪು ಚುಕ್ಕೆ ಬೊಟ್ಟನ್ನು ಇಡುತ್ತಿದ್ದರು. ಶರೀರದಲ್ಲಿ ಬಲಗಡೆ ಪರಮಾತ್ಮನಿಗೆ ಸಂಬಂಧಿಸಿರುವುದೆಂದು, ಎಡಗಡೆ ಪ್ರಕೃತಿಗೆ ಸಂಬಂಧಿ**

**ಸಿರುವುದೆಂದು ಹಿರಿಯರ ಒಂದು ಭಾವ. ಅರ್ಧ ನಾರೀಶ್ವರ ಆಕಾರವೂ ಸಹ ಬಲಗಡೆ ಈಶ್ವರನಾಗಿ ಎಡಗಡೆ ಪಾರ್ವತಿಯಾಗಿ ಚಿತ್ರೀಕರಿಸಿ ತೋರಿಸುವುದು ಈ ಅರ್ಥದಿಂದಲೇ ಎಂದು ತಿಳಿಯಬೇಕು.** ಕೆನ್ನೆಯ ಮೇಲೆ ಕಪ್ಪು ಬೊಟ್ಟು ಹುಟ್ಟು ಮಚ್ಚೆಯ ನಮೂನೆಗೋಸ್ಕರ ಇಟ್ಟಿರುವುದೆಂದು ತಿಳಿಯಬೇಕು. ಎಷ್ಟೋ ದೈವಜ್ಞಾನ ತಿಳಿಯುವ ಸಲುವಾಗಿ ಇಟ್ಟಿರುವ ಗುರುತಾಗಿ ಇರುವ ಮತ್ತವನ್ನು ದೃಷ್ಠಿ ಬೊಟ್ಟು ಎಂದಾಗಲಿ, ಜಿಷ್ಟಿ ಬೊಟ್ಟು ಎಂದಾಗಲಿ ಹೇಳಿಕೊಳ್ಳುವುದು ತಪ್ಪು. ಪೂರ್ವದಲ್ಲಿ ಮದುವೆ ಕಾರ್ಯದಲ್ಲಿ ಪ್ರತಿಯೊಂದು ಕಾರ್ಯಕ್ಕೂ ಅರ್ಥವನ್ನು ವಧುವರರಿಗೆ ತಿಳಿ ಹೇಳುತ್ತಿದ್ದರು. ಅಲ್ಲಿಯವರೆಗೂ ತಿಳಿಯದ ದೈವ ವಿಷಯ ಆ ದಿನದಿಂದ ವಧುವರರಿಗೆ ತಿಳಿಯಬೇಕೆಂದು ತಪ್ಪದೇ ಕೆನ್ನೆಯ ಮೇಲೆ ಬೊಟ್ಟನ್ನು ಇಡುವುದು ನಡೆಯುತ್ತಿತ್ತು. ಆ ಆಚರಣೆ ಈ ದಿನಗಳಲ್ಲಿ ಸಹ ಉಳಿದಿದ್ದರೂ ದೈವ ಜ್ಞಾನ ವಿಷಯ ತಿಳಿಯದಂತೆ ಹೋಗಿದೆ. ಈಗಲಾದರೂ ಪೂರ್ವದಲ್ಲಿ ಹಿರಿಯರು ಹೇಳಿದ ಇಂದೂ ಸಾಂಪ್ರದಾಯಗಳ ಪ್ರಕಾರ ಅರ್ಥ ಸಹಿತವಾಗಿ ಕೆನ್ನೆಯ ಮೇಲೆ ಬೊಟ್ಟಿನಿಂದ ಮದುವೆಗಳು ಮಾಡಿಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.



# ಮಡಿಲಕ್ಕಿ – ಮುಡಿಯಕ್ಕಿ

ಮದುವೆ ಕಾರ್ಯದಲ್ಲಿ ಮದುಮಗನಿಗೆ ಮುಡಿ ಅಕ್ಕಿ, ಮದುಮಗಳಿಗೆ ಮಡಿಲಕ್ಕಿ ಕಟ್ಟುವ ಸಾಂಪ್ರದಾಯವೂ ಸಹ ಪೂರ್ವಕಾಲದಲ್ಲಿ ಇತ್ತು. ಮದುಮಗನಿಗೆ ಭುಜದ ಮೇಲೆ ಒಂದು ಚಿಕ್ಕ ವಸ್ತ್ರದ ಕೊನೆಯ ಭಾಗದಲ್ಲಿ ಸ್ವಲ್ಪ ಅಕ್ಕಿಯನ್ನು ಮುಡಿ ಹಾಕಿ ಇಡುತ್ತಿದ್ದರು. ರೇಷ್ಮೆ ಶಾಲುವಿನಲ್ಲಿ ಅಕ್ಕಿಯನ್ನು ಮುಡಿ ಹಾಕಿ ಬಲ ಭುಜದ ಮೇಲಿಂದ ಹಿಂದೆ ಎಡಭುಜದ ಕೆಳಗೆ ತೆಗೆದುಕೊಂಡು ಬಂದು ಬಲ ಭುಜದ ಹಿಂಬದಿಯಲ್ಲಿ ನೇತಾಡುವಂತೆ ಕಟ್ಟುತ್ತಿದ್ದರು. ಮುಂದಿನಿಂದ ಬಲ ಭುಜದ ಮೇಲೆ ಎಡೆಗಡೆಯ ಕಂಕಳ ಕೆಳಗಿನಿಂದ ಪುನಃ

ಬಲ ಭುಜದ ಮೇಲೆ ಶಾಲು ಕಾಣಿಸುತ್ತಿರುತ್ತದೆ. ಅಕ್ಕಿಯ ಮುಡಿ ಮಾತ್ರ ಬಲ ಭುಜದ ಹಿಂದೆ ನೇತಾಡುತ್ತಿರುತ್ತದೆ. ಹಾಗೆ ಇಡುವುದರಿಂದ ಬುತ್ತಿ ಮೂಟೆ ಹಿಂಬದಿಯಲ್ಲಿ ಹಾಕಿಕೊಂಡಂತಿರುತ್ತದೆ. **"ಹಿರಿಯರ ಮಾತು ಬುತ್ತಿ ಮೂಟೆ"** ಎಂಬಂತೆ ಪೂರ್ವದ ವಾಕ್ಯವಿದೆ. ದೊಡ್ಡವರ ಮಾತು ಎಂದರೆ **"ತಿಳಿದವರು ಹೇಳಿದ ಆತ್ಮಜ್ಞಾನ ಎಂದು ಅರ್ಥ"**. ದೈವ ಜ್ಞಾನವನ್ನು ಹಿರಿಯರ ಮಾತು ಎನ್ನುವುದು ಸಹಜ. ದೈವ ಜ್ಞಾನವನ್ನು ಹಿರಿಯರಾದ ಜ್ಞಾನಿಗಳಿಂದ ತಿಳಿದು ಕೊಂಡು ನಾನು ಜ್ಞಾನವನ್ನು ಯಾವಾಗಲೂ ಹೊಂದಿದ್ದೇನೆಂದು ತಿಳಿಸುವ ಸಲುವಾಗಿ ಆ ವಿಧವಾದ ಮುಡಿಅಕ್ಕಿಯನ್ನು ಮದುಮಗನಿಗೆ ಕಟ್ಟುತ್ತಿದ್ದರು. ಮನುಷ್ಯನಲ್ಲಿನ ಜ್ಞಾನ ಹೊರಗೆ ಕಾಣಿಸದಂತಿರುತ್ತದೆ. ಆದ್ದರಿಂದ ಯಾವ ಮನುಷ್ಯನಲ್ಲಿ ಎಷ್ಟು ಜ್ಞಾನವಿರುವುದು ಹೇಳಲಾಗುವುದಿಲ್ಲ. ನೋಡುತ್ತಲೇ ಜ್ಞಾನವು ಕಾಣಿಸುವುದಿಲ್ಲವಾದ್ದರಿಂದ ಅಕ್ಕಿಯನ್ನು ಜ್ಞಾನ ಚಿಹ್ನೆಗಳಾಗಿ ಮಾಡಿ ಕಾಣಿಸದಂತೆ ಹಿಂದೆ ಇರುವಂತೆ ಇಡುತ್ತಿದ್ದರು. ಇದು ಮದುವೆ ಸಮಯದಲ್ಲಿ ಮಧುಮಗನಿಗೆ ಕಟ್ಟುವ ಮುಡಿ ಅಕ್ಕಿವೊಂದರ ಸಾಂಪ್ರದಾಯ. **"ಸ" ಎಂದರೆ ಒಳ್ಳೆಯ ಜ್ಞಾನವೆಂದು "ದ್ದಿ" ಎಂದರೆ ಬುದ್ಧಿ ಎಂದು,** ಒಳ್ಳೆಯ ಜ್ಞಾನವಿರುವ ಬುದ್ದಿಯನ್ನು ಸದ್ದಿ(ಬುತ್ತಿ) ಎಂದು ಬೋಧಿಸುವ ಜ್ಞಾನಿಗಳನ್ನು ದೊಡ್ಡವರೆಂದು ಪೂರ್ವಕಾಲದಲ್ಲಿ ಎನ್ನುತ್ತಿದ್ದರು. ಆದ್ದರಿಂದ ಜ್ಞಾನವನ್ನು ಹೊಂದಿದವರನ್ನು ಬುತ್ತಿ ಮೂಟೆ ಹೊಂದಿದವನೆಂದು ಹೇಳುತ್ತಿದ್ದರು. ಅಂತಹ ಬುತ್ತಿ ಮೂಟೆಗೆ ಸಮಾನವಾಗಿ ಹಿಡಿಕೆಯಷ್ಟು ಅಕ್ಕಿಯನ್ನು ಮೂಟೆ ಕಟ್ಟಿ ಮದುವೆ ಹಿರಿಯರು ಕಟ್ಟುತ್ತಿದ್ದರೆಂದು ತಿಳಿಯಬೇಕು. ಅದನ್ನೇ ಮುಡಿಅಕ್ಕಿ ಎಂದು ಅನ್ನುತ್ತಿದ್ದರು.

ಮದುಮಗಳಿಗೆ ಹೊಟ್ಟೆ ಮುಂದೆ ಅಕ್ಕಿಯನ್ನು ಮುಡಿ ಹಾಕಿ ಇಡುವುದು ಸಹ ಇದೆ. ಹಾಗೆ ಅಕ್ಕಿಯನ್ನು ಇಡುವುದನ್ನು ಮಡಿಲಕ್ಕಿ ಎನ್ನುತ್ತಾರೆ. ಅಕ್ಕಿ ಎನ್ನುತ್ತಲೇ ಜ್ಞಾನ ಚಿಹ್ನೆಯೆಂದು ತಿಳಿಯುತ್ತಿದೆ. ಹಾಗೆ ಮಡಿಲಕ್ಕಿಯನ್ನು ಮದುಮಗಳಿಗೆ ಇಡುವುದರಲ್ಲಿ ಪೂರ್ವಕಾಲದ ಜ್ಞಾನಿಗಳ ಉದ್ದೇಶ ಏನೆಂದು ತಿಳಿದುಕೊಳ್ಳೋಣ. ಸ್ತ್ರೀಯರಲ್ಲಿ ಗರ್ಭೋತ್ಪತ್ತಿಗೆ ಸ್ಥಾನ ಹೊಟ್ಟೆ. ಸ್ತ್ರೀ ಗರ್ಭವತಿ ಆದರೆ ಹುಟ್ಟುವ ಸಂತತಿ ದೈವಜ್ಞಾನ ಹೊಂದಿರಬೇಕೆಂಬ ಉದ್ದೇಶದಿಂದ

ಹೊಟ್ಟೆ ಸ್ಥಾನದಲ್ಲಿ ಅಕ್ಕಿಯನ್ನು ಕಟ್ಟುತ್ತಿದ್ದರು. ಮಗು ಹುಟ್ಟಿದರೆ ಮಡಿಲಲ್ಲಿ ಇಟ್ಟುಕೊಳ್ಳುತ್ತೇವೆ. ಮಡಿಲಲ್ಲಿ ಬೆಳೆಯುವ ಮಗು ಜ್ಞಾನವನ್ನೇ ಹೊಂದಿರುವಂತೆ ಬೆಳೆಸುತ್ತೇನೆಂದು ಸ್ತ್ರೀ ತಿಳಿಸುತ್ತಾ, ನನ್ನ ಹೊಟ್ಟೆ ಸಂತತಿ ಜ್ಞಾನದಲ್ಲಿಯೇ ಬೆಳೆದು ಜ್ಞಾನವನ್ನೇ ಹೊಂದಿರುತ್ತೇನೆಂದು ತಿಳಿಸುವುದಕ್ಕೆ ಸ್ತ್ರೀ ಮಡಲಕ್ಕಿಯನ್ನು ಧರಿಸುತ್ತಿದ್ದಾಳೆ. ಮಡಿಲಕ್ಕಿಯಲ್ಲಿ ಅಕ್ಕಿಯ ಜೊತೆ ಐದು ವಸ್ತುಗಳನ್ನು ಇಡುವ ಪದ್ಧತಿ ಸಹ ಇದೆ. ಹುಟ್ಟಿದ ಮಗು ಮೊದಲು ಪಂಚಭೂತಗಳ ವಿಷಯಗಳಲ್ಲಿ ಹುಟ್ಟಿದರೂ, ನನ್ನ ಮಡಿಲಲ್ಲಿ ಬೆಳೆಯುವಷ್ಟು ಕಾಲ ಐದು ಪ್ರಪಂಚ ವಿಷಯಗಳು ದೈವ ಜ್ಞಾನದಲ್ಲಿ ಮುಳುಗಿ ಹೋಗುತ್ತವೆಂದು ತಿಳಿಯುವಂತೆ ಐದು ವಸ್ತುಗಳು ಮುಳುಗಿ ಹೋಗುವಂತೆ ಅಕ್ಕಿಯನ್ನು ಹೆಚ್ಚಾಗಿ ಕಟ್ಟುತ್ತಿದ್ದರು. ಮದುಮಗನಿಗೆ ಹಿಡಿಕೆಯಷ್ಟು ಅಕ್ಕಿಯನ್ನು ಕಟ್ಟಿದರೆ, ಮದುಮಗಳಿಗೆ ಐದು ವಸ್ತುಗಳು ಮುಳುಗಿಹೋಗುವಂತೆ ಹೆಚ್ಚಾಗಿ ಅಕ್ಕಿಯನ್ನು ಕಟ್ಟುವ ಆಚಾರ ಇದೆ. ಮಡಿಲಕ್ಕಿ ಕಟ್ಟುವುದು, ಮಡಿಲಕ್ಕಿಯಲ್ಲಿ ಚಿಕ್ಕ ಚಿಕ್ಕದಾಗಿರುವ ಐದು ವಸ್ತುಗಳನ್ನು ಇಡುವುದು ಈಗಲೂ ಇದ್ದರೂ ಅವುಗಳ ಅರ್ಥ ತಿಳಿದಿಲ್ಲ. ಮಡ್ಲಕ್ಕಿಯ ಅರ್ಥ ಎಂದೋ ತಿಳಿಯದಂತೆ ಹೋದರೂ ಮಡ್ಲಕ್ಕಿಯನ್ನು ಸ್ತ್ರೀಯರಿಗೆ ಮದುವೆಯಲ್ಲಿಯೂ ಗಂಡನ ಮನೆಗೆ ಕಳುಹಿಸುವಾಗಲೂ ಹೊಟ್ಟೆಯ ಮುಂದೆ ಕಟ್ಟುವುದು ಈಗಲೂ ಇದೆ. ಪುರುಷರಿಗೆ ಮದುವೆ ಸಮಯದಲ್ಲಿ ಕಟ್ಟುವ ಮುಡ್ಲಕ್ಕಿ ಒಂದರ ಅರ್ಥ ವಿವರ ತಿಳಿಯದಂತೆ ಹೋಗಿದೆ. ಅರ್ಥ ತಿಳಿಯದೆ ಹೋದರೂ ಮಡಿಲಕ್ಕಿ ಕಟ್ಟುವುದು ಈಗಲೂ ಇದೆ. ಮುಡಿಯಕ್ಕಿಯ ಆಚರಣೆ ಈಗ ಕೆಲವುಕಡೆ ಇಲ್ಲವೆಂದು ಹೇಳಬಹುದು. ಮದುವೆ ಎಂದರೆ ದೇವರೆಂದು, ಅಕ್ಕಿಯೆಂದರೆ ಜ್ಞಾನವೆಂದು ತಿಳಿಯದೇ ಇರುವುದರಿಂದ ಈದಿನ ಮದುವೆ ಕಾರ್ಯಗಳೆಲ್ಲವೂ ಅಜ್ಞಾನದಿಂದಲೇ ಕೂಡಿಕೊಂಡಿರುವವಾಗಿವೆ. ಈಗಲಾದರೂ ಮದುವೆ ಕಾರ್ಯವೆಂದರೆ ದೈವತ್ವವನ್ನು ತಿಳಿಸುವ ಕಾರ್ಯವಾಗಿ ಭಾವಿಸಿ ಮಾಡಿಕೊಂಡರೆ ಸರಿಯಾದ ಇಂದೂ ಸಾಂಪ್ರದಾಯಗಳನ್ನು ಅನುಸರಿಸಿದವರಾಗಿತ್ತೇವೆ. ನಿಜವಾದ ಸತಿ ಪತಿಗಳಾಗುತ್ತೇವೆ. ಅರ್ಥತಿಳಿದು ಮಾಡಿಕೊಳ್ಳದ ಮದುವೆ ಭೂಟಾಟಿಕೆಯ ಮದುವೆ ಆಗುತ್ತದೆ, ಅವರು ನಾಟಕದ ಸತಿ–ಪತಿಗಳಾಗುತ್ತಾರೆ.



# ಕಾಲುಂಗುರ

ಹುಟ್ಟಿದಮನೆ ಮೆಟ್ಟಿದ ಮನೆ ಸ್ತ್ರೀಯರಿಗೆ ಮಾತ್ರ ಇದೆ. ಪುರುಷನಿಗೆ ಹುಟ್ಟಿದ ಮನೆ ಮಾತ್ರ ಇದೆ. ಪುರುಷನಾದ ಪರಮಾತ್ಮ ಎಂದಿಗೂ ಒಂದೇ ವಿಧವಾಗಿ ಬದಲಾವಣೆ ಹೊಂದದವನಾಗಿರುತ್ತಾನೆಂದು ತಿಳಿಯಲು ಪರಮಾತ್ಮನಿಗೆ ಗುರುತಾಗಿರುವ ಪುರುಷನಿಗೆ ಹುಟ್ಟಿದ ಮನೆ ಮಾತ್ರ ಇರುತ್ತದೆ ಯೆಂದು ತಿಳಿಸಿದ್ದಾರೆ. ಸ್ತ್ರೀಯಾದ ಪ್ರಕೃತಿ ಎಂದಿಗೂ ಒಂದೇ ವಿಧವಾಗಿ ಇರುವುದಿಲ್ಲವೆಂದು, ಹುಟ್ಟಿದ ನಂತರ ಬದಲಾವಣೆ ಹೊಂದುತ್ತಿರುತ್ತಾಳೆಂದು ತಿಳಿಯುವಂತೆ ಪ್ರಕೃತಿಗೆ ಗುರುತಾಗಿರುವ ಸ್ತ್ರೀಗೆ ಮೆಟ್ಟಿದ ಮನೆಯೂ ಸಹ ಇದೆ ಎಂದು ದೊಡ್ಡವರು ತಿಳಿಸಿದ್ದಾರೆ. ಹುಟ್ಟುವುದಕ್ಕು ಸಾಯುವುದಕ್ಕು ಮಧ್ಯದಲ್ಲಿ ಮೆಟ್ಟುವುದು ಸಹ ಇದೆ. ಮೆಟ್ಟುವುದು ಎಂದರೆ ಜೀವನವನ್ನು ಸಾಗಿಸುವುದು ಎಂದರ್ಥ. ಪ್ರಕೃತಿಯಿಂದಲೇ ಜೀವಿಗಳು ಜೀವನ ವಿಧಾನವನ್ನು ಸಾಗಿಸುತ್ತಿವೆ. ಆದ್ದರಿಂದ ಮೆಟ್ಟಿದಮನೆ ಇರುವುದು ಸ್ತ್ರೀ ಎಂದು ಹೇಳುತ್ತಾ ಬಂದಿದ್ದಾರೆ. ಇದರಿಂದ ಪುರುಷತತ್ವವಾದ ಪರಮಾತ್ಮನನ್ನು (ದೇವರನ್ನು), ಸ್ತ್ರೀತತ್ವವಾದ ಪ್ರಕೃತಿಯನ್ನು ತಿಳಿಯುತ್ತಾರೆಂದು ಹಾಗೆ ತಿಳಿಸುತ್ತಾ ಬಂದಿದ್ದಾರೆ.

ಮದುವೆ ನಂತರ ಹುಟ್ಟಿದ ಮನೆಯಲ್ಲಿ ಮಗ ಮಗನಾಗಿಯೇ ಇರುತ್ತಾನೆ, ಮನೆಗೆ ಬಂದ ಹುಡುಗಿ ಮಾತ್ರ ಸೊಸೆ ಎಂಬ ಹೊಸ ಹೆಸರು ಹೊಂದುತ್ತಾಳೆ. ಮದುವೆಯಲ್ಲಿ ಮದುಮಗ, ಮದುಮಗಳು ಎಂಬ ಹೆಸರು ಹೊಂದಿದವರು ಮದುವೆ ನಂತರ ಮದುಮಗ ಮಗನಾಗಿ ಉಳಿಯುವುದು, ಮದುಮಗಳು ಮಾತ್ರ ಸೊಸೆಯಾಗಿ ಬದಲಾವಣೆ ಹೊಂದುವುದರಲ್ಲಿ ಏನೋ ವಿಶೇಷತೆ ಇದೆ ಎಂದು ಹೇಳಬಹುದು. ಅದು ಏನೆಂದರೆ! **"ಮಗ, ಸೊಸೆ ಎಂಬ ಪದಗಳೇ ಎಷ್ಟೋ ಪ್ರತ್ಯೇಕವಾದ ಅರ್ಥದಿಂದ ಕೂಡಿಕೊಂಡಿವೆ"**. ಮಗ ಏಕವಚನದಿಂದ ಕೂಡಿಕೊಂಡಿದೆ. ಸೊಸೆ ಬಹುವಚನದಿಂದ ಕೂಡಿಕೊಂಡಿದೆ. ಆಧ್ಯಾತ್ಮಿಕ ಅರ್ಥದ ಪ್ರಕಾರ ಮಗ ಪರಮಾತ್ಮ ಅಂಶ, ಸೊಸೆ ಪ್ರಕೃತಿ ಅಂಶ ಎಂದು ಹೇಳಬಹುದು. ಅದರ ಪ್ರಕಾರ ಮಗ ಏಕ ವಚನದಿಂದ ಹೇಳುವ ಪರಮಾತ್ಮ ಅಂಶವಾದ

ಜೀವಾತ್ಮವಾಗಿ, ಸೊಸೆ ಬಹುವಚನದಿಂದ ಹೇಳುವ ಪ್ರಕೃತಿ ಅಂಶವಾದ ಗುಣಗಳೆಂದು ಅರ್ಥ. **ಗುಣಗಳಿಗೂ, ಜೀವಿಗೂ ಪ್ರತೀಕವಾಗಿ ಸೊಸೆ, ಮಗ ಎನ್ನುವುದು ನಡೆಯುತ್ತಿತ್ತು.** ಶರೀರದಲ್ಲಿರುವ ಗುಣಗಳೊಂದಿಗೆ ಜೀವಿಯು ಬೆರೆತು ಹೋಗುತ್ತಿದ್ದಾನೆ ಆದ್ದರಿಂದ ಬೆರೆತು ಹೋಗುವವನನ್ನು ಅಥವಾ ಕೂಡಿ ಹೋಗುವವನನ್ನು ಏಕ ವಚನದಿಂದ ಮಗ ಎಂದು ಕರೆಯುತ್ತಿದ್ದಾರೆ. ಹಾಗೆಯೆ ಗುಣಗಳು ಜೀವಿಯನ್ನು ತನ್ನಲ್ಲಿ ಬೆರೆಸಿಕೊಳ್ಳುತ್ತಿವೆ. ಆದ್ದರಿಂದ ಜೀವಿಯನ್ನು ಬೆರೆಸಿಕೊಳ್ಳುವ ಗುಣಗಳನ್ನು ಬಹುವಚನದಿಂದ ಸೊಸೆ ಎಂದಿದ್ದಾರೆ. ಮಗ ಎಂದರೆ ಕೂಡುವವನು, ಸೊಸೆ ಎಂದರೆ ಕೂಡಿಕೊಳ್ಳುವುದೆಂದು ಅರ್ಥ. ಕೂಡುವವನು ಜೀವಿ, ಕೂಡಿಕೊಳ್ಳುವವು ಗುಣಗಳು ಎಂದು ಜ್ಞಾನದ ರೀತಿಯ ಅರ್ಥ.

ಶರೀರದಲ್ಲಿ ಜೀವಿಸುವವನು ಜೀವಿ ಆದರೆ ಜೀವನವನ್ನು ಕಾರ್ಯ ರೂಪದಲ್ಲಿ ಸಾಗಿಸುವವು ಗುಣಗಳು. ಗುಣಗಳಿಗೆ ಅಂದರೆ ಪ್ರಕೃತಿಗೆ ಇನ್ನೊಂದು ಹೆಸರಾದ ಸ್ತ್ರೀಗೆ ಮೆಟ್ಟಿದ ಮನೆ ಇದೆ ಎಂದು ಹೇಳುತ್ತಿದ್ದರು. ಮೆಟ್ಟಿದ ಮನೆ ಎಂದರೆ ಜೀವನವನ್ನು ಸಾಗಿಸುವುದು ಎಂದರ್ಥ. ಅದನ್ನೇ ಬಾಹ್ಯವಾಗಿ ಒಬ್ಬ ಸ್ತ್ರೀ ಹುಟ್ಟಿದ ಮನೆಯಿಂದ ಮೆಟ್ಟಿದ ಮನೆಗೆ ಹೋದರೆ ಗಿಟ್ಟುವವರೆಗೂ ಅಲ್ಲಿಯೇ ಇರಬೇಕೆಂದು ಹೇಳುತ್ತಿರುತ್ತಾರೆ. ಗಿಟ್ಟುವವರೆಗೂ ಎಂದರೆ ಮರಣಿಸುವವರೆಗೂ ಎಂದರ್ಥ. ಮರಣ ಶ್ವಾಸ ನಿಂತು ಹೋದಾಗಲೇ ಬರುತ್ತದೆ. ಪಂಚ ಭೂತಗಳಲ್ಲಿ ಶ್ವಾಸ ಎರಡನೆಯದು. ಬದುಕಿರುವಾಗ ಶ್ವಾಸ ಆತ್ಮ ಶಕ್ತಿಯಿಂದ ನಡೆಯುತ್ತಿದೆ. ಮೆಟ್ಟಿದ ಮನೆಯಲ್ಲಿರುವ ಸ್ತ್ರೀ ತನ್ನ ಮರಣ ದವರೆಗೂ ತನಗೆ ಶಕ್ತಿ ಕೊಡುವ ಆತ್ಮವನ್ನು ಮರೆಯಬಾರದೆಂದು ದೊಡ್ಡವರು ತಿಳಿಸುತ್ತಿದ್ದರು. ಜೀವಿಯು ಜೀವನವನ್ನು ಗುಣಗಳಿಂದ ಸಾಗಿಸಲು ಶರೀರದಲ್ಲಿ ಆತ್ಮ ಶಕ್ತಿ ಉಪಯೋಗ ಪಡುತ್ತಿದೆ. ಆತ್ಮ ಶರೀರದಲ್ಲಿ ಶ್ವಾಸ ಆಡಿಸುವವರೆಗೇ ಜೀವನವು ಸಾಗುತ್ತದೆ. ಶ್ವಾಸ ನಿಂತು ಹೋದರೆ ಒಳಗಡೆ ಗುಣಗಳೂ ಸಹ ನಿಂತು ಹೋಗುತ್ತವೆ ಎಂದರ್ಥ.

ಜೀವನ ನಡೆಯುವುದಕ್ಕೆ ಪಂಚಭೂತಗಳು ಕೆಲಸ ಮಾಡುತ್ತಿವೆ ಹಾಗೇ ಶರೀರವನ್ನು ನಡೆಸಲು ಕಾಲು ಕೆಲಸ ಮಾಡುತ್ತಿದೆ. ಕಳೆಯುತ್ತಿರುವ ಜೀವನಕ್ಕೆ ಪಂಚಭೂತಗಳಿದ್ದಂತೆ, ನಡೆಯುತ್ತಿರುವ ಕಾಲಿಗೂ ಸಹ ಐದು ಬೆರಳುಗಳು ಇವೆ. ಕಾಲಿನ ಬೆರಳುಗಳನ್ನು ಪಂಚಭೂತಗಳಾಗಿ ಲೆಕ್ಕಿಸಿಕೊಂಡರೆ ಮೊದಲ ದೊಡ್ಡ ಹೆಬ್ಬೆರಳು ಆಕಾಶವಾಗಿ, ಎರಡನೆಯ ಬೆರಳು ಗಾಳಿಯಾಗಿ, ಮೂರನೆಯ ಬೆರಳು ಅಗ್ನಿಯಾಗಿ, ನಾಲ್ಕನೆಯ ಬೆರಳು ನೀರಾಗಿ, ಐದನೆಯ ಬೆರಳು ಭೂಮಿಯಾಗಿ ಗುರುತಿಸಿಕೊಳ್ಳಬೇಕಾಗಿದೆ. ಎರಡನೆಯ ಬೆರಳು ಗಾಳಿಯಾಗಿ ಲೆಕ್ಕಿಸಲ್ಪಟ್ಟು ಶರೀರದಲ್ಲಿನ ಶ್ವಾಸಕ್ಕೆ (ಪ್ರಾಣಕ್ಕೆ) ಗುರುತಾಗಿದೆ. ಶ್ವಾಸವನ್ನೇ ಪ್ರಾಣ ಎಂದು ಸಹ ಅನ್ನುತ್ತಿದ್ದೇವೆ. ಶರೀರದಲ್ಲಿ ಪ್ರಾಣ ಇರುವವರೆಗೆ ಜೀವಿಯು ಇರುತ್ತಾನೆ. ಆತ್ಮ ಇರುವವರೆಗೂ ಪ್ರಾಣ ಇರುತ್ತದೆ. ಪ್ರಾಣ ಎಂದರೆ ಶ್ವಾಸ ಆತ್ಮ ಶಕ್ತಿಯಿಂದಲೇ ನಡೆಯುತ್ತಿದೆ ಎಂದು ಮರೆಯಬಾರದು. ಮೆಟ್ಟಿದಮನೆ ಯಲ್ಲಿರುವ ಸ್ತ್ರೀಗೆ ಗಿಟ್ಟಿದ (ಸಾವಿನ) ಮನೆಯೂ ಸಹ ಅದೇ ಆಗಬೇಕು. ಆದ್ದರಿಂದ ಪ್ರಾಣ ಇರುವವರೆಗೂ ಅಲ್ಲಿಯೇ ಸೊಸೆ ಎಂಬ ಹೆಸರಿನಿಂದ ಇರಬೇಕು. ಕಳೆಯುತ್ತಿರುವ ಪ್ರಕೃತಿ ಜೀವನವನ್ನು ನಡೆಯುತ್ತಿರುವ ಕಾಲಿಗೆ ಹೋಲಿಸಿದಾಗ, ಕಾಲಿನ ಬೆರಳನ್ನು ಪಂಚಭೂತಗಳಿಗೆ ಹೋಲಿಸಿದಾಗ, ಅದರಲ್ಲಿ ಎರಡನೇ ಬೆರಳನ್ನು ಪ್ರಾಣವಾಗಿ ಹೋಲಿಸಿದಾಗ, ಆ ಪ್ರಾಣ ಆತ್ಮದಿಂದಲೇ ನಡೆಯುತ್ತಿದೆ ಎಂದು ತಿಳಿಯುವುದಕ್ಕೆ ಸ್ತ್ರೀ ಕಾಲಿನಲ್ಲಿನ ಎರಡನೆಯ ಬೆರಳಿಗೆ **"ಕಾಲುಂಗುರ"** ಎನ್ನುವ ಹೆಸರಿನಿಂದ ಉಂಗುರದಂತಾದ್ದನ್ನು ಆತ್ಮಕ್ಕೆ ಗುರುತಾಗಿ ಇಡುವುದು ನಡೆಯುತ್ತಿದೆ. ಲೋಹಗಳಲ್ಲಿ ಬಂಗಾರವನ್ನು ಪರಮಾತ್ಮನ ಗುರುತಾಗಿ, ಬೆಳ್ಳಿಯನ್ನು ಆತ್ಮಕ್ಕೆ ಗುರುತಾಗಿ, ರಾಗಿ ಜೀವಾತ್ಮನಿಗೆ ಗುರುತಾಗಿ ದೊಡ್ಡವರು ನಿರ್ಣಯ ಮಾಡಿ ಪರಮಾತ್ಮ ಗುರುತಾದ ತಾಳಿಬೊಟ್ಟನ್ನು ಬಂಗಾರದಿಂದಲೂ, ಆತ್ಮಕ್ಕೆ ಗುರುತಾದ ಕಾಲುಂಗುರವನ್ನು ಬೆಳ್ಳಿಯಿಂದಲೂ ಮಾಡಿಸುತ್ತಿದ್ದರು. ಈಗಲೂ ಅದೇ ಪದ್ಧತಿ ಸಾಗುತ್ತಿದ್ದರೂ ಬೆಳ್ಳಿ ಕಾಲುಂಗುರಕ್ಕೂ, ಬಂಗಾರ ತಾಳಿಗೆ ಅರ್ಥ ಇಲ್ಲದಂತೆ ಹೋಗಿದೆ ಎಂದು ಹೇಳಬಹುದು.

ಮರಣ ಬರುವವರೆಗೂ ಜೀವನವನ್ನು ಸಾಗಿಸಬೇಕೆಂದು, ಜೀವನ ಶ್ವಾಸದಿಂದ ಸಾಗುತ್ತಿದೆಯೆಂದು, ಆ ಶ್ವಾಸ ಆತ್ಮದಿಂದಲೇ ನಡೆಯುತ್ತಿದೆ ಎಂದು ತಿಳಿಯುವುದಕ್ಕೆ ಮದುವೆಯಾದ ಪ್ರತಿ ಸ್ತ್ರೀಗೆ ಕಾಲಿನ ಎರಡನೇ ಬೆರಳಿಗೆ ಉಂಗುರ ಇಡುವುದು ಸಾಂಪ್ರದಾಯವಾಗಿದೆ. ಕಾಲುಂಗುರ ಸಾಂಪ್ರದಾಯವು ಇಂದಿಗೂ ಉಳಿದಿರುವುದಕ್ಕೆ ಸಂತೋಷವಾದರೂ, ಅವುಗಳ ವಿವರ ತಿಳಿಯದೆ ಹೋಗಿರುವುದಕ್ಕೆ ಸ್ವಲ್ಪ ಚಿಂತಿಸಬೇಕಾಗಿದೆ. ಅದು ಆತ್ಮಮಯವಾಗಿ ಆತ್ಮದಿಂದಲೇ ಸಾಗುತ್ತಿದೆಯೆನ್ನುವುದಕ್ಕೆ ಬೆಳ್ಳಿಯಿಂದಲೇ ಕಾಲುಂಗುರ ಧರಿಸಬೇಕೆಂದು, ಆ ಕಾಲುಂಗುರವು ಸಹ ಸೊಸೆ ಎಂದು ಹೆಸರು ಹೊಂದಿದ ಸ್ತ್ರೀಯರೇ ಧರಿಸಬೇಕೆಂದು ತಿಳಿಯುವುದು ಆತ್ಮ ಜ್ಞಾನವೇ ಆಗುತ್ತದೆ. ಮದುವೆ ಕಾರ್ಯಗಳಲ್ಲಿ ಆತ್ಮ ಜ್ಞಾನ ಸಾಂಪ್ರದಾಯಗಳು ದೊಡ್ಡವರು ಇಟ್ಟಿರುವಾಗ ಅವುಗಳ ಅರ್ಥ ತಿಳಿಯದೆಹೋದರು ಕೆಲವು ಆಚರಣೆಗಳು ಮಾತ್ರ ನಮ್ಮ ಮಧ್ಯದಲ್ಲಿಯೇ ಉಳಿದುಕೊಂಡಿವೆ. **ಕಾಲುಂಗುರ ಧರಿಸುವ ಆಚಾರವೂ ಇತ್ತ ಇಂದೂ ಮತದಲ್ಲೇ ಅಲ್ಲದೆ ಅತ್ತ ಕ್ರಿಶ್ಚಿಯನ್ ಮತದಲ್ಲಿಯೂ ಮತ್ತು ಇಸ್ಲಾಮ್ ಮತದಲ್ಲಿಯೂ ಸಹ ಭಾರತದೇಶದಲ್ಲಿ ಕಾಣಿಸುತ್ತದೆ.** ಪ್ರತ್ಯಕ್ಷವಾಗಿ ತಿಳಿಯದೆ ಹೋದರು ಪರೋಕ್ಷವಾಗಿ ದೇವರ ಜ್ಞಾನವನ್ನು ತಿಳಿಸುವ ಸಾಂಪ್ರದಾಯವು ಇತರ ಮತಗಳಲ್ಲಿಯೂ ಸಹ ಇರುವುದು ಸಂತೋಷಿಸಬೇಕಾದ ವಿಷಯ. ಮಗ ಹೋದರೆ ಸೊಸೆ ಎಂಬ ಪದಕ್ಕೆ ಅರ್ಥವೇ ಇಲ್ಲ. ಆದ್ದರಿಂದ ಗಂಡ ಸತ್ತುಹೋದ ಹೆಂಡತಿಗೆ ಕಾಲುಂಗುರ ತೆಗೆಯುವುದು ನಡೆಯುತ್ತದೆ. ಮಗ ಸೊಸೆ ಆಧ್ಯಾತ್ಮಿಕ ಯುಕ್ತವಾದ ಪದಗಳು. ಆದ್ದರಿಂದ ಆಧ್ಯಾತ್ಮಿಕ ಅರ್ಥದಿಂದಲೇ ಮಗ ಹೋದ ನಂತರ ಕಾಲುಂಗುರ ತೆಗೆಯುವುದು ನಡೆಯುತ್ತಿದೆ. ಕಾಲುಂಗುರ ಇಲ್ಲದ ಸ್ತ್ರೀ ಗಂಡ ಇಲ್ಲದ ಹೆಂಡತಿ ಎನ್ನುವಂತೆ ಆತ್ಮವಿಲ್ಲದ ಪ್ರಕೃತಿ ಎಂದು ತಿಳಿಯಬೇಕು.



# ತಾಳಿಬೊಟ್ಟು

ಸರ್ವ ಪ್ರಪಂಚವನ್ನು ಸೃಷ್ಟಿಸಿರುವುದು ಪರಮಾತ್ಮ ಆದರೂ ಪರಮಾತ್ಮ ಕಾಣಿಸುವವನಲ್ಲ. ಸೃಷ್ಟಿಸಲ್ಪಟ್ಟ ಪ್ರಕೃತಿ ಮಾತ್ರ ಕಾಣಿಸುತ್ತದೆ. ಪ್ರಕೃತಿ ಸ್ವತಂತ್ರವಾಗಿ ಕಾಣಿಸುತ್ತಿದ್ದರೂ ಕಾಣಿಸದಂತೆ ಪರಮಾತ್ಮನ ಅಧೀನದಲ್ಲಿಯೇ ಇದೆ. ಪ್ರಕೃತಿಯಲ್ಲಿನ ಅಣುವಿನಿಂದ ಭೂಗೋಳದವರೆಗೂ, ಸೂರ್ಯ ಗೋಳದಿಂದ ಪ್ರಾರಂಭವಾಗಿ ಎಷ್ಟೋ ದೊಡ್ಡವುಗಳಾದ ನಕ್ಷತ್ರ ಸಮುದಾಯಗಳವರೆಗೂ ತನ್ನ ಅಧೀನದಲ್ಲಿಟ್ಟುಕೊಂಡು ನಡೆಸುವುದು ಪರಮಾತ್ಮ. ಪ್ರಕೃತಿಯು ಸ್ತ್ರೀ ತತ್ವವಾದರೆ ಪರಮಾತ್ಮ ಪುರುಷತತ್ವವಾಗಿ ಇದೆ. ಈ ಎರಡು ಇವೆಯೆಂದು ತಿಳಿಯು ವಂತೆಯೇ ಜಗತ್ತಿನಲ್ಲಿ ಸ್ತ್ರೀ ಪುರುಷ ಶರೀರಗಳು ತಯಾರಾಗಿವೆ. ಪ್ರಕೃತಿ ಪುರುಷರಿಂದಲೇ ಜಗತ್ತು ತಯಾರಾಗುತ್ತಿದೆ ಎಂಬ ಸಿದ್ಧಾಂತದ ಪ್ರಕಾರವೆ ಸ್ತ್ರೀ ಪುರುಷರಿಗೆ ಸಂತಾನ ಉಂಟಾಗುತ್ತಿದೆ. ಯಾವಾಗಲೂ ಪ್ರಕೃತಿ ಪರಮಾತ್ಮನ ಅಧೀನದಲ್ಲಿ ಇರುತ್ತದೆಂದು ತಿಳಿಸುವ ಕಾರಣವೇ ಮದುವೆಯ ದಿನ ಪುರುಷನು ಸ್ತ್ರೀ ಕೊರಳಿನಲ್ಲಿ ಒಂದು ದಾರವನ್ನು ಮುಡಿ ಹಾಕುತ್ತಿದ್ದಾನೆ. **ನೀನು ಪ್ರಕೃತಿಯು ನಾನು ಪುರುಷನೆಂದು ಅರ್ಥಕೊಡುವಂತೆ ಪ್ರಕೃತಿ ಎಂಬ ಮೂರು ಅಕ್ಷರಗಳಿಗೆ ತಕ್ಕಂತೆ ದಾರದಿಂದ ಮೂರು ಮುಡಿಗಳನ್ನು ಹಾಕುತ್ತಿದ್ದಾರೆ.** ಗುರುತನ್ನು ಬೊಟ್ಟು ಅನ್ನುವುದು ಸಹ ಇದೆ. ಅಂದಿನಿಂದ ಸ್ತ್ರೀ ಪುರುಷನ ಅಧೀನದಲ್ಲಿ ಇರಬೇಕೆಂಬ ಭಾವ ಉಂಟುಮಾಡುವಂತೆ ಅಧೀನಕ್ಕೆ ಗುರುತಾಗಿ ಬಂಗಾರದ ಬೊಟ್ಟನ್ನು ಕಟ್ಟುವುದು ನಡೆಯುತ್ತಿದೆ. ಅಧೀನಕ್ಕೆ ಸೂಚನೆಯಾಗಿರುವುದರಿಂದ ಅದನ್ನು **"ಆಲಿಬೊಟ್ಟು"** ಅನ್ನುತ್ತಿದ್ದರು ಕಾಲಕ್ರಮದಲ್ಲಿ ಆಲಿಬೊಟ್ಟು ಎಂಬುದು ತಾಳಿ ಬೊಟ್ಟಾಗಿ ಬದಲಾಗಿದೆ ಎಂದು ಗ್ರಹಿಸಬೇಕು. ಪ್ರಕೃತಿಯ ಮೇಲೆ (ದೇವರ ಆಧಿಕ್ಯತೆ ಯನ್ನು) ಪುರುಷನಾಧಿಕ್ಯತೆಯನ್ನು ತಿಳಿಸುವ ಗುರುತೇ ತಾಳಿ ಕಟ್ಟುವುದೆಂದು ಗ್ರಹಿಸಬೇಕು.

ಪ್ರಕೃತಿ ಪುರುಷರ ವಿವರವನ್ನು ತಿಳಿಸುವುದು ತಾಳಿಬೊಟ್ಟು. ಪರಮಾತ್ಮ ಜ್ಞಾನ ಒಳಗೊಂಡಿರುವುದರಿಂದ ತಾಳಿಬೊಟ್ಟನ್ನು ಲೋಹಗಳಲ್ಲಿ ಬೆಲೆಯುಳ್ಳ ಪವಿತ್ರವಾದ ಬಂಗಾರದಿಂದಲೇ ತಯಾರುಮಾಡಿಸುತ್ತಿದ್ದಾರೆ. ತಾಳಿಬೊಟ್ಟನ್ನು

ದುಂಡಾದ ಬಂಗಾರದ ಬಿಲ್ಲೆಯಿಂದ ತಯಾರುಮಾಡಿ ಅದಕ್ಕೆ ಮಧ್ಯ ಭಾಗದಲ್ಲಿ ಚಿಕ್ಕ ತಗ್ಗು ಮಾಡುತ್ತಿದ್ದರು. ಒಂದು ಕಡೆ ತಗ್ಗನ್ನು ಮಾಡಿದರೆ ಎರಡನೆಯ ಕಡೆ ಉಬ್ಬಾಗಿ ಕಾಣಿಸುತ್ತದೆ. ಸಾಂಪ್ರದಾಯ ಪದ್ಧತಿಯಲ್ಲಿ ತಯಾರುಮಾಡುವ ತಾಳಿಬೊಟ್ಟು ಒಂದು ಕಡೆ ತಗ್ಗಿನಂತಿದ್ದು ಒಂದು ಕಡೆ ಉಬ್ಬಾಗಿರುತ್ತದೆ. ಎತ್ತರವಾಗಿರುವ ಭಾಗ ಪುರುಷನ ಗುರುತಾದ ಪರಮಾತ್ಮ ಗುರುತೆಂದು, ಕುಣಿಯಾಗಿರುವ ತಗ್ಗು ಭಾಗ ಸ್ತ್ರೀ ಗುರುತಾದ ಪ್ರಕೃತಿಗೆ ಗುರುತೆಂದು ಪೂರ್ವಕಾಲದಲ್ಲಿ ದೊಡ್ಡವರು ತಿಳಿಸುತ್ತಿದ್ದರು. ಮದುಮಗ ಮದುಮಗಳಿಗೆ ತಾಳಿಕಟ್ಟಿದಾಗ ತಗ್ಗಾದ ಭಾಗ ಹೊರಗೆ ಕಾಣಿಸುವಂತೆ, ಉಬ್ಬಾದಭಾಗ ಕಾಣಿಸದಂತೆ ಒಳಗೆ ಇರುವಂತೆ ಕಟ್ಟುತ್ತಿದ್ದರು. ಸ್ತ್ರೀ ತಾಳಿ ಧರಿಸಿದಾಗ ಯಾರಾದರು ತಾಳಿಬೊಟ್ಟನ್ನು ನೋಡಿದರೆ ತಗ್ಗು ಭಾಗ ಕಾಣಿಸುತ್ತದೆ. ಹಾಗೆ ಕಾಣಿಸುವುದರಿಂದ ಕಾಣಿಸುವುದೆಲ್ಲವೂ ಪ್ರಕೃತಿಯೆ ಎಂದು, ನಿನಗೆ ಎದುರಿಗೆ ತಿಳಿಯುವುದೆಲ್ಲಾ ಪ್ರಕೃತಿ ಸ್ವರೂಪವೇ ಎಂದು ತಿಳಿಸುವ ಅರ್ಥದಿಂದ ಇದೆ. ತಾಳಿಬೊಟ್ಟು ಹಿಂಭಾಗದಲ್ಲಿ ಕಾಣಿಸದ ಉಬ್ಬುಭಾಗವಿದೆ. ಹಾಗೆಯೇ ಉಬ್ಬು ಭಾಗ ಕಾಣಿಸದಿರುವುದರಿಂದ ಕಾಣಿಸದ ದೇವರು ಪ್ರಕೃತಿ ಹಿಂದೆ ಇದ್ದಾನೆಂದು, ಪ್ರಕೃತಿಯನ್ನು ದಾಟಿದರೇನೆ ದೇವರು ತಿಳಿಯುತ್ತದೆಂಬ ಅರ್ಥದಿಂದ ಇದೆ. ಈ ವಿಧವಾಗಿ ಹಿರಿಯರು ಪ್ರಕೃತಿ ಪರಮಾತ್ಮರ ವಿವರವನ್ನು ತಾಳಿಬೊಟ್ಟಿನಲ್ಲಿ ಅಳವಡಿಸಿ ಇಟ್ಟಿದ್ದಾರೆ. ಇಂದೂ ಧರ್ಮಯುಕ್ತವಾಗಿ ದೈವ ಜ್ಞಾನದ ಪ್ರಕಾರ ಸುಮಾರು ಒಂದು ಇಂಚು ಅಗಲ ಇರುವ ಬಂಗಾರದ ಬಿಲ್ಲೆಯ ಮೇಲೆ ಮಧ್ಯದಲ್ಲಿ ಸ್ವಲ್ಪ ತಗ್ಗು ಒಂದು ಕಡೆ ಸ್ವಲ್ಪ ಉಬ್ಬು ಒಂದು ಕಡೆ ಇಟ್ಟು ಮಾಡುತ್ತಿದ್ದರು. ಈಗಿನ ಕಾಲದಲ್ಲಿ ಕೆಲವು ಪ್ರಾಂತಗಳಲ್ಲಿ ಒಂದು ಬಿಲ್ಲೆ ಸ್ಥಾನದಲ್ಲಿ ಎರಡು ಬಿಲ್ಲೆಗಳು ಸಹ ಬಂದಿವೆ. ಈ ವಿಧವಾಗಿ ಎರಡು ಬಿಲ್ಲೆಗಳು ಧರಿಸುವುದು ಸಾಂಪ್ರದಾಯ ವಿರುದ್ಧ, ಧರ್ಮರಹಿತವಾಗುತ್ತದೆ. ಕೆಲವರೇನೋ ಸ್ವಲ್ಪ ಅಗಲವಾದ ಬಿಲ್ಲೆಯ ಮೇಲೆ ಮಧ್ಯದಲ್ಲಿ ಕುಣಿ ಇಡದೆ ಒಟ್ಟಾಗಿ ಬಿಲ್ಲೆ ಎಲ್ಲವೂ ಕುಣಿ ಇಡುತ್ತಿದ್ದಾರೆ. ಮತ್ತೆ ಕೆಲವರು ಮಧ್ಯದಲ್ಲಿ ಕುಣಿ ಇರುವ ಬಿಲ್ಲೆಯನ್ನೇ ಧರಿಸಿದರೂ ಕುಣಿ ಇರುವ ಭಾಗ ಒಳಗಡೆಗಿರುವಂತೆ ಧರಿಸುತ್ತಿದ್ದಾರೆ. ಆ

ವಿಧವಾಗಿ ಧರಿಸುವುದು ಸಹ ಜ್ಞಾನ ವಿರುದ್ಧವಾಗುತ್ತದೆ. ಹೆಚ್ಚಾಗಿ ಬಿಲ್ಲೆಗಳನ್ನು ಧರಿಸುವುದನ್ನು, ಉಬ್ಬು ಭಾಗ ಮೇಲಕ್ಕೆ ಕಾಣಿಸುವಂತೆ ಧರಿಸುವುದು ಅರ್ಥವಿಲ್ಲದ ಕೆಲಸ ಆಗುತ್ತದೆ. ಅದರಿಂದ ಇಂದೂ ಸಾಂಪ್ರದಾಯಗಳು ಮರೆಯಾಗಿ ಅಜ್ಞಾನ ಬೆಳೆದು ಹೋಗುತ್ತದೆ. ಆಲಿಬೊಟ್ಟಿಗೆ ಅರ್ಥ ತಿಳಿದು ಧರಿಸುವುದರಿಂದ ಅವರಲ್ಲಿ ಇಂದೂತ್ವ ಕಾಣಿಸುತ್ತದೆ. ಹಾಗೆ ಅಲ್ಲದೆಹೋದರೂ ಹೆಸರು ಇಂದೂವಾದರೂ ನಿಜವಾಗಲು ಇಂದೂ ಅಲ್ಲ.



# ಅಕ್ಷತೆಗಳು

ಕ್ಷಯ ಎಂದರೆ ನಾಶವೆಂದು ಅರ್ಥ. ಅಕ್ಷಯ ಎಂದರೆ ನಾಶ ಇಲ್ಲದ್ದು ಎಂದು ಅರ್ಥ. ಕ್ಷಯವಾಗದಿರುವುದು ಅಕ್ಷಯವಾದುದು ಪರಮಾತ್ಮ, ಪರಮಾತ್ಮನ ಜ್ಞಾನ ಅಕ್ಷಯವಾದುದು. ಅಕ್ಷಯವಾದ ಜ್ಞಾನದ ಗುರುತೇ ಅಕ್ಕಿಯಿಂದ ತಯಾರು ಮಾಡಿದ ಅಕ್ಷತೆಗಳು. ಅಕ್ಷತೆಗಳೆಂದರೆ ನಾಶವಿಲ್ಲದ ದೈವಜ್ಞಾನದಿಂದ ಕೂಡಿ ಕೊಂಡಿರುವುಗಳೆಂದು ಅರ್ಥ. ತಾಳಿಬೊಟ್ಟು ಕಟ್ಟಿದ ಕೂಡಲೇ ಪೂರ್ವಕಾಲದಲ್ಲಿ ವಧುವರರಿಗೆ ಅಕ್ಷತೆಗಳನ್ನು ಇತರರಿಂದ ಅವರ ತಲೆಯ ಮೇಲೆ ಹಾಕಿಸುತ್ತಿದ್ದರು. ಇಲ್ಲಿಯವರೆಗೂ ಮಧುಮಗ, ಮಧುಮಗಳಾಗಿದ್ದ ನೀವು ಈಗಿನಿಂದ ಪತಿ ಪತ್ನಿಯರಾಗಿ ಅಥವಾ ಸತಿಪತಿಯರಾಗಿ ಬದಲಾಗಿದ್ದೀರೆಂದು, ಈಗಿನಿಂದ ನೀವು ಜ್ಞಾನಮಾರ್ಗದಲ್ಲಿ ಜ್ಞಾನಾಭಿವೃದ್ಧಿ ಮಾಡಿಕೊಳ್ಳಬೇಕೆಂದು ಅಕ್ಷತೆಗಳು ಹಾಕುತ್ತಿದ್ದರು. ಪೂರ್ವಕಾಲದಲ್ಲಿ ಜ್ಞಾನ ನಿಷ್ಠಾಪರರಾಗಿ ಜ್ಞಾನಶಕ್ತಿ ಎಂಬ ಜ್ಞಾನಾಗ್ನಿ ಇರುವ ಯೋಗಿಗಳು ಅಥವಾ ಮಹರ್ಷಿಗಳನ್ನು ಮದುವೆಯ ದಿನ ಆಹ್ವಾನಿಸಿ ಅವರ ಕೈಯಿಂದ ಅಕ್ಷತೆಗಳು ಹಾಕಿಸುತ್ತಿದ್ದರು. ಇತರರು ಯಾರೂ ಹಾಕುತ್ತಿರಲಿಲ್ಲ. ಹಾಗೆ ಮಾಡುವುದರಲ್ಲಿ ಜ್ಞಾನಿಗಳ, ಯೋಗಿಗಳ ಹಸ್ತದಿಂದ ಹಾಕಲ್ಪಟ್ಟ ಅಕ್ಕಿ ಅಕ್ಷತೆಗಳೆಂಬ ಜ್ಞಾನಶಕ್ತಿಯನ್ನು ಹೊಂದಿರುವವಾಗಿ ಸತಿಪತಿಗಳ ಶಿರಸ್ಸುಗಳನ್ನು ತಾಕಿ ಆ ಶಕ್ತಿ ಅವರ ತಲೆಯಲ್ಲಿ ಪ್ರವೇಶಿಸಿ ಅದೇ

ಉಪದೇಶವಾಗುತ್ತದೆ. ಜ್ಞಾನಶಕ್ತಿ ಅಥವಾ ಜ್ಞಾನಾಗ್ನಿಯನ್ನು ದಾನವಾಗಿ ಹೊಂದುವುದೇ ಉಪದೇಶವೆಂದು ತಿಳಿದ ಹಿರಿಯರು ಪೂರ್ವಕಾಲದಲ್ಲಿ ಜ್ಞಾನಾಗ್ನಿ ಇರುವ ಜ್ಞಾನಿಗಳು, ಯೋಗಿಗಳ ಕೈಯಿಂದಲೇ ಅಕ್ಷತೆಗಳನ್ನು ಹಾಕಿಸುತ್ತಿದ್ದರು. ಯೋಗಿಗೆ ಅಥವಾ ಮಹರ್ಷಿಗೆ ಹೊರತು ಬೇರೆಯಾರಿಗೂ ಅಕ್ಷತೆಗಳು ಕೊಡುವವರಲ್ಲ. ಈಗಿನ ಕಾಲದಲ್ಲಿ ಅಕ್ಷತೆಗಳೆಂದರೆ ಏನೋ? ಅವು ಯಾರ ಕೈಯಿಂದ ಹಾಕಿಸಬೇಕೆಂದು ತಿಳಿಯದೆ, ಅವುಗಳ ಅರ್ಥ ಪ್ರಾಮುಖ್ಯತೆ ತಿಳಿಯದವರಾಗಿ ಎಲ್ಲರ ಕೈಯಿಂದ ಹಾಕಿಸುತ್ತಿದ್ದೇವೆ. ಅದೂ ಯಾರು ಯಾರಿಗೆ ಹಾಕುತ್ತಿದ್ದಾರೋ ತಿಳಿಯದ ಸ್ಥಿತಿಯಲ್ಲಿ ಬಂದಿರುವ ಎಲ್ಲರ ನೆತ್ತಿಯ ಮೇಲೆ ಅಕ್ಷತೆಗಳು ಬೀಳುತ್ತಿವೆ. ಈ ಲೆಕ್ಕ ಪ್ರಕಾರ ಅಕ್ಷತೆಗಳು ಹಾಕುವ ಸಾಂಪ್ರದಾಯ ಇಂದಿನವರೆಗೂ ಉಳಿದುಕೊಂಡಿದ್ದರೂ ಅದರ ಅರ್ಥ ನೂರಕ್ಕೆ ನೂರರಷ್ಟು ಹೋಗಿದೆ ಎಂದು ತಿಳಿಯಬೇಕು. ಎಲ್ಲಿಯಾದರು ಗುಡಿ ಗೋಪುರಗಳ ಮೇಲೆ ಲಕ್ಷ್ಮೀ ವಿಷ್ಣುವಿಗೆ ಮದುವೆ ಮಾಡುವ ಸಂಘಟನೆ ಗೊಂಬೆಗಳ ರೂಪದಲ್ಲಿ ಇರುವುದು ನೋಡಿರುತ್ತೇವೆ. ಅಲ್ಲಿ ನಾರದ ತುಂಬುರರು ಮೊದಲಾದವರು ಪ್ರಕ್ಕದಲ್ಲಿ ನಿಂತಿರುವಾಗ, ಒಬ್ಬನೇ ಒಬ್ಬ ಮಹರ್ಷಿ ಅವರಿಗೆ ಅಕ್ಷತೆಗಳು ಹಾಕುತ್ತಿರುವಂತೆ ಚಿತ್ರಿಸಿ ಪ್ರತಿಷ್ಟಿಸಿದರೂ ಅದರ ಅರ್ಥ ತಿಳಿಯದಂತೆ ಹೋಗಿದೆ. ಪುರಾತನದಲ್ಲಿ ತಯಾರಾದ ದೇವಾಲಯಗಳ ಮೇಲಾದರು ಒಬ್ಬರೇ ಅಕ್ಷತೆಗಳು ಹಾಕುವ ಸಾಂಪ್ರದಾಯ ಗೊಂಬೆಗಳ ರೂಪದಲ್ಲಿ ಉಳಿದಿರುವುದಕ್ಕೆ ಸಂತೋ ಷಿಸೋಣ. ಹಾಗೆಂದು ಸುಮ್ಮನಿರದೆ ಇದು ನಮ್ಮ ಸಂಪ್ರದಾಯವೆಂದು ಇತರರಿಗೆ ತಿಳಿಸಿ ಇಂದೂ ಧರ್ಮ ಆಚರಣೆ ನಡೆಯುವಂತೆ ನೋಡೋಣ. ಜ್ಞಾನವನ್ನು ಹೊಂದಿದ ಯೋಗಿಗಳ ಕೈಯಿಂದಲೇ ಅಕ್ಷತೆಗಳು ಹಾಕಿಸಿ ಅಲ್ಲಿಯವರೆಗೂ ಉಪದೇಶ ಇಲ್ಲದವರಿಗೆ ಅದೇ ಮೊದಲ ಉಪದೇಶವಾಗಿ ತಿಳಿಸೋಣ. ಮೊದಲೇ ಉಪನಯನ ಉಪದೇಶ ಹೊಂದಿದವರಿಗೆ ಜ್ಞಾನಾಭಿವೃದ್ಧಿ ಉಂಟಾಗುವಂತೆ ಮಾಡೋಣ.



# ತಲಂಬರಗಳು

ಮದುವೆಯವರೆಗೂ ಜವಾಬ್ಧಾರಿ ಇಲ್ಲದೆ ಬೆಳೆದಿರುವ ಯುವತಿ ಯುವಕರಿಗೆ ಮದುವೆಯಿಂದ ಪ್ರಪಂಚದಲ್ಲಿ ಮುಳುಗಿ ಪ್ರಪಂಚ ಧನವನ್ನೇ ಸಂಪಾದಿಸಿಕೊಳ್ಳುತ್ತಾ ಬದುಕಲು ತಿಳಿಸಿದಂತೆ ಅರ್ಥ ಹೀನವಾದ ಮದುವೆ ಇಂದಿನ ಕಾಲದಲ್ಲಿ ಮಾಡುತ್ತಿದ್ದಾರೆ. ಪೂರ್ವಕಾಲದಲ್ಲಿ ಹಾಗಲ್ಲದೆ ಧರ್ಮ ಯುಕ್ತವಾದ ಸಾಂಪ್ರದಾಯಗಳ ಆಚರಣೆಯಿಂದಲೇ ಮದುವೆ ಮಾಡುತ್ತಿದ್ದರು. ಮದುವೆ ಎನ್ನುವುದು ಮಹತ್ತರ ಜ್ಞಾನೋಪದೇಶವಾಗಿ ಭಾವಿಸುತ್ತಿದ್ದರು. ಅಕ್ಷತೆಗಳೆಂಬ ಜ್ಞಾನಕಿರಣಗಳು ಮಹಾತ್ಮರಿಂದ ತಮ್ಮ ಶಿರಸ್ಸುಗಳನ್ನು ತಾಕಿದ ನಂತರ, ಬದುಕಿರುವ ಜೀವನ ಕಾಲವನ್ನೆಲ್ಲ ಜ್ಞಾನ ಸಮುಪಾರ್ಜನೆಯಲ್ಲಿಯೇ ಬದುಕುತ್ತಾ ದಾಂಪತ್ಯ ಜೀವನವನ್ನು ಕಳೆಯಬೇಕೆಂದು ಆಗಿನ ಹಿರಿಯರ ಸಂದೇಶ. ದಾಂಪತ್ಯ ಜೀವನದಲ್ಲಿ ಸತಿಗೆ ಜ್ಞಾನ ಇಲ್ಲದೆಹೋದರೆ ಪತಿ ಜ್ಞಾನ ತಿಳಿಸಬೇಕೆಂದು, ಒಂದುವೇಳೆ ಪತಿಗೇ ಜ್ಞಾನ ಇಲ್ಲದೆ ಹೋದರೆ ಸತಿ ತಿಳಿಸಬೇಕೆಂದು ಆಗಿನ ಹಿರಿಯರ ಸಂದೇಶ. ಪತಿ ಸತಿಯರ ತಲೆಗೆ ಜ್ಞಾನ ಸೇರಿಸಬೇಕೆಂದು, ಹಾಗೆಯೇ ಸತಿ ಪತಿಯ ತಲೆಗೆ ಜ್ಞಾನ ಸೇರಿಸಬೇಕೆಂದು ತೋರಿಸುವುದೇ ತಲಂಬರಗಳು ಒಬ್ಬರ ನೆತ್ತಿಯ ಮೇಲೆ ಒಬ್ಬರು ಸುರಿದುಕೊಳ್ಳುವುದೆಂದು ತಿಳಿಯಬೇಕು.

ಅಕ್ಕಿ ಜ್ಞಾನದ ಚಿಹ್ನೆ ಎಂದು ಮೊದಲೇ ತಿಳಿದುಕೊಂಡಿದ್ದೇವೆ. ಅಂಬರವೆಂದರೆ ಆಕಾಶ. ತಲಂಬರವೆಂದರೆ ಆಕಾಶದಿಂದ ತಲೆಗೆ ಸೇರುವುದೆಂದು ಅರ್ಥ. ಜ್ಞಾನ ಆಕಾಶದಿಂದ ಶಬ್ದರೂಪವಾಗಿ ಸೇರುತ್ತದೆ. ಬಯಲಿನಿಂದ ಬರುವ ಶಬ್ಧ ಕಿವಿಗಳ ಮೂಲಕ ತಲೆಯಲ್ಲಿ ಸೇರುತ್ತದೆ. ಆದ್ದರಿಂದ ಜ್ಞಾನವನ್ನು ತಲಂಬರ ಎಂದಿದ್ದಾರೆ. ಸತಿಯಿಂದ ಪತಿಗೂ, ಪತಿಯಿಂದ ಸತಿಗೂ ಜ್ಞಾನ ಹರಡಬೇಕೆಂದು, ಒಬ್ಬರ ಸಹಕಾರದಿಂದ ಒಬ್ಬರು ಉಪದೇಶ ಹೊಂದಿ ನಂತರ ಜ್ಞಾನವನ್ನು ಬೆಳೆಸಿಕೊಳ್ಳುತ್ತಾ ಹೋಗಬೇಕೆಂದು ತಿಳಿಸುವುದೇ ಒಬ್ಬರ ನೆತ್ತಿಯ ಮೇಲೆ ಒಬ್ಬರು ತಲಂಬರಗಳನ್ನು ಸುರಿದುಕೊಳ್ಳುವುದೆಂದು ಪೂರ್ವಿಕರ ಭಾವ.

ಎಷ್ಟೋ ದೊಡ್ಡ ಅರ್ಥದಿಂದ ಕೂಡಿಕೊಂಡಿರುವ ಆಚಾರ ಈ ಕಾಲದಲ್ಲಿ ಅರ್ಥ ಹೀನವಾದರೂ ಆ ಕಾರ್ಯವಾದರೂ ಉಳಿದುಕೊಂಡಿರುವುದಕ್ಕೆ ಸಂತೋಷಿಸೋಣ. ಇಷ್ಟಕ್ಕೆ ಸಂತೋಷಿಸಿ ಸುಮ್ಮನಿರದೆ ಇದು ಧರ್ಮಯುಕ್ತವಾದ ಆಚರಣೆ ಎಂದು, ಈ ಆಚರಣೆ ಅರ್ಥದಿಂದ ಕೂಡಿಕೊಂಡಾಗಲೇ ಪ್ರಯೋಜನವೆಂದು, ಹಾಗೆ ಮಾಡದೆ ಹೋದರೆ ಮದುವೆ ಸಣ್ಣ ಮಕ್ಕಳಾಡಿ ಕೊಳ್ಳುವ ಗೊಂಬೆಗಳ ಆಟಕ್ಕೆ ಸಮಾನವೆಂದು ಗುರುತು ಇಟ್ಟುಕೊಳ್ಳಬೇಕು.



# ಅರುಂಧತಿ ನಕ್ಷತ್ರ

ತಾಳಿ ಕಟ್ಟಿದ ನಂತರ, ಮಹಾತ್ಮನಿಂದ ಅಕ್ಷತೆಗಳು ಹಾಕಿಸಿಕೊಂಡ ನಂತರ, ತಲಂಬರಗಳು ಶಿರಸ್ಸುಗಳ ಮೇಲೆ ಸುರಿದುಕೊಂಡ ನಂತರ, ಕೊನೆಯದಾಗಿ ಅರುಂಧತಿ ನಕ್ಷತ್ರವನ್ನು ತೋರಿಸುವುದು ಇದೆ. ಈ ಆಚರಣೆ ಸಹ ಮದುವೆಗಳಲ್ಲಿ ಮುಖ್ಯವಾದ ಕೊನೆಯ ಸಾಂಪ್ರದಾಯವಾಗಿ ಇದೆ. ಅದನ್ನು ಕುರಿತು ಸ್ವಲ್ಪ ವಿವರಿಸಿಕೊಂಡು ನೋಡೋಣ. ಚಂದ್ರನು ಜ್ಞಾನ ಚಿಹ್ನೆಯಾದರೆ, ನಕ್ಷತ್ರ ಮೋಕ್ಷದ ಚಿಹ್ನೆಯಾಗಿದೆ. ಸೂರ್ಯನು ಚಂದ್ರನು ಉಳಿದ ಕೆಲವು ನಕ್ಷತ್ರಗಳು ನಮಗೆ ಪೂರ್ವ ಪಶ್ಚಿಮಗಳಾಗಿ ಇದ್ದಾರೆ. ಆದ್ದರಿಂದ ಹಗಲು, ರಾತ್ರಿಗಳಲ್ಲಿ ಕೆಲವು ಕಾಣಿಸುತ್ತವೆ, ಕೆಲವು ಕಾಣಿಸದೇ ಹೋಗುವುದು ನಡೆಯುತ್ತದೆ. ಉತ್ತರ, ದಕ್ಷಿಣದ ಕಡೆ ಇರುವ ನಕ್ಷತ್ರಗಳು ಮಾತ್ರ ನಮಗೆ ಯಾವಾಗಲೂ ಕಾಣಿಸುತ್ತಲೇ ಇವೆ. ಹಾಗೆಯೇ ಉತ್ತರ ಕಡೆ ಯಾವಾಗಲೂ ಕಾಣಿಸುವ ನಕ್ಷತ್ರಗಳಲ್ಲಿ ಅತಿ ದೊಡ್ಡ ನಕ್ಷತ್ರ ಆರುಂಧತಿ ನಕ್ಷತ್ರ. ಅದು ರಾತ್ರಿ ಹಗಲು ಒಂದೇ ಕೋನದಲ್ಲಿ ಇದ್ದು ಕಾಣಿಸುತ್ತಲೇ ಇದೆ. ಹಗಲಿನಲ್ಲಿ ಸೂರ್ಯನ ಬೆಳಕಿನ ಮುಂದೆ ಅದು ನಮ್ಮ ದೃಷ್ಠಿಗೆ ಕಾಣಿಸದಂತೆ ಹೋದರೂ ಆರುಂಧತಿ ನಕ್ಷತ್ರ ನಿರಂತರ (ಹಗಲೂ, ರಾತ್ರಿ) ಉತ್ತರ ಕೋನದಲ್ಲಿ ಇದೆ. ಪೂರ್ವಕಾಲದಲ್ಲಿ ರಾತ್ರಿ ವೇಳೆ ಮದುವೆ ನಡೆದರೆ ನವ ದಂಪತಿಗಳಿಗೆ ಆ ನಕ್ಷತ್ರವನ್ನು

ತೋರಿಸುತ್ತಿದ್ದರು. ಒಂದು ವೇಳೆ ಹಗಲಿನಲ್ಲಿ ಮದುವೆ ನಡೆದರೆ ಆ ನಕ್ಷತ್ರ ಕಾಣಿಸುವುದಿಲ್ಲ. ಆದ್ದರಿಂದ ಆ ಕಾಲದಲ್ಲಿ ನೆಲಬಾಗಿದ (ನೇಲವೆಂಪಲಿ) ಗಿಡವನ್ನು ತರಿಸಿ ಭೂಮಿ ಮೇಲೆ ಹಾಸಿ ಅದರ ಮೇಲೆ ದಂಪತಿಗಳನ್ನು ನಿಲ್ಲಿಸಿ ನಕ್ಷತ್ರವನ್ನು ತೋರಿಸುತ್ತಿದ್ದರು. ನೆಲಬಾಗಿದ ಗಿಡವನ್ನು ತುಳಿದು ನಿಂತುಕೊಂಡರೆ ಸೂರ್ಯರಶ್ಮಿ ಕಾಣಿಸದಂತಾಗಿ ರಾತ್ರಿಯಂತೆ ಇದ್ದು ಹಗಲಿನಲ್ಲಿಯೇ ನಕ್ಷತ್ರಗಳು ಕಾಣಿಸುತ್ತವೆ. ಆದ್ದರಿಂದ ಪೂರ್ವಕಾಲದಲ್ಲಿ ನೆಲಬಾಗಿದ ಗಿಡವನ್ನು ಮದುವೆಗಳಲ್ಲಿ ತರಿಸುತ್ತಿದ್ದರು. ಹಾಗೆ ತೋರಿಸುವುದರಿಂದ ಪ್ರಯೋಜನವೇನೆಂದು ಕೆಲವರಿಗೆ ಸಂಶಯ ಬರಬಹುದು ಅದಕ್ಕೆ ಸಮಾಧಾನವನ್ನು ಕೆಳಗೆ ನೋಡೋಣ.

ಮದುವೆ ಆಚರಣೆಯಲ್ಲಿ ಭೂಮಿ ಮೇಲೆ ಹುಟ್ಟಿದ ಹೆಣ್ಣು ಗಂಡು ಎಲ್ಲರೂ ದೈವ ಸಂತತಿಯೆಂದು ಮಗಳು ಮಗನೆಂದು ಕರೆಯುವುದರ ಮೂಲಕ ತಿಳಿದುಕೊಂಡವರು, ಆ ದಿನದಿಂದ ಜ್ಞಾನ ನೇತ್ರದ ದೃಷ್ಟಿ ಹೊಂದಿರುತ್ತೇವೆಂದು ಭಾಸಿಂಗ ಕಟ್ಟಿದವರು, ಜ್ಞಾನ ದೃಷ್ಟಿ ಉಂಟಾಗಿ ಮಾಯೆ ವೊಂದರ ಬಂಧಗಳನ್ನು ಕಿತ್ತು ಹಾಕುತ್ತೇನೆಂದು, ಮಾಯೆಯೊಂದಿಗೆ ಹೋರಾಡುವ ಸೈನಿಕನಂತೆ ಇರುತ್ತೇನೆಂದು ಖಡ್ಗವನ್ನು ಹಿಡಿದವರು, ಮೊದಲ ಬಾರಿ ಮಹಾತ್ಮರಿಂದ ಅಕ್ಷತೆಗಳು ಹಾಕಿಸಿಕೊಂಡು ಜ್ಞಾನಾಗ್ನಿಯನ್ನು ಬೆಳಗಿಸಿಕೊಂಡವರು, ಆ ಜ್ಞಾನಾಗ್ನಿ ನಂದಿಹೋಗದಂತೆ ಸತಿಪತಿಯಿಂದ, ಪತಿಸತಿಯಿಂದ ಹೆಚ್ಚಿಸಿಕೊಳ್ಳುವೆವೆಂದು ತಲಂಬರಗಳನ್ನು ತಲೆ ಮೇಲೆ ಸುರಿದುಕೊಂಡು ತೋರಿಸಿ ಅವರು ಕೊನೆಗೆ ನಾವು ಸೇರುವ ಮೋಕ್ಷ ಪದವಿ ಇದೇ ಎಂದು ನಮಗೆ ತಿಳಿಸುವಂತೆ ಕೊನೆಯದಾಗಿ ನಕ್ಷತ್ರವನ್ನು ನೋಡುತ್ತಿದ್ದಾರೆ. ಈ ವಿಧವಾಗಿ ಜೀವಿಯು ದೈವದಿಂದ ಬೇರೆಯಾಗಿದ್ದಾನೆಂದು ಆತನು ಪುನಃ ದೈವವನ್ನು ಸೇರಿ ಜನ್ಮ ರಾಹಿತ್ಯ ಮಾಡಿಕೊಳ್ಳಲು ಅನುಸರಿಸಬೇಕಾದ ಮಾರ್ಗಗಳನ್ನು ಆಚರಣೆಯಲ್ಲಿ ಭಾವಯುಕ್ತವಾಗಿ ತೋರಿಸುವುದೇ ಮದುವೆ ಆಚರಣೆಯ ಒಂದು ಅರ್ಥ.



# ಮಂಟಪ

ಜೀವಿಯು ಪಂಚಭೂತ ನಿರ್ಮಿತವಾದ ದೇಹದಲ್ಲಿರುವಾಗ ಈ ವಿಧಾನವೆಲ್ಲ ಆಚರಿಸಬೇಕಾಗಿದೆ ಎಂದು ತಿಳಿಸುವ ಪ್ರಯುಕ್ತ ಐದು ಕಂಬಗಳ ಮಂಟಪದ ಒಳಗೇ ಮದುವೆ ನಡೆಸುತ್ತಿದ್ದರು. ಇಲ್ಲಿ ನಾಲ್ಕು ಕಂಬಗಳ ಮದುವೆಯ ಮಂಟಪವೇ ಆಗಲಿ ಐದು ಕಂಬಗಳ ಮಂಟಪ ಎಲ್ಲಿದೆ ಎಂದು ಕೆಲವರು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ! ಪಂಚಭೂತಗಳೆಂದರೆ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿ. ಇವುಗಳಲ್ಲಿ ಅಗ್ನಿ, ನೀರು, ಭೂಮಿ ಕಣ್ಣಿಗೆ ಕಾಣಿಸುವಂತಿದ್ದರೆ ಗಾಳಿ ಸ್ಪರ್ಶದ ಮೂಲಕ ತಿಳಿಯುತ್ತದೆ. ಆಕಾಶ ಮಾತ್ರ ಪ್ರತ್ಯೇಕವಾಗಿದ್ದು ಉಳಿದವುಗಳ ಹಾಗೆ ತಿಳಿಯದಂತೆ ಇದೆ. ಆದ್ದರಿಂದ ಕಾಣಿಸುವ ನಾಲ್ಕು ಕಂಬಗಳನ್ನು ನಾಲ್ಕು ದಿಕ್ಕುಗಳಲ್ಲಿಯೂ ಊತಿಟ್ಟು ಅವುಗಳ ಆಧಾರದಿಂದ ಮೇಲೆ ಹಾಕುವ ಮಂಟಪದ ಮಧ್ಯ ಭಾಗ ಮಾತ್ರ ಗೋಪುರದ ಹಾಗೆ ಮೊನೆ ಮೇಲಕ್ಕಿರುವಂತೆ ಪೂರ್ವಕಾಲದಲ್ಲಿ ನಿರ್ಮಿಸುತ್ತಿದ್ದರು. ಆಗ ಭೂಮಿಯ ಮೇಲೆ ಊತಿರುವ ಕೊನೆಗಳು ನಾಲ್ಕಾದರೆ ಐದನೆಯ ಕೊನೆ ಮೇಲಕ್ಕೆ ತೋರಿಸುವಂತೆ ಇರುತ್ತದೆ. ಮಂಟಪದ ಮಧ್ಯ ಮೇಲಿರುವ ಮೊನೆಗೆ ಆಕಾಶವೆಂದು, ಕೆಳಗೆ ಮುಂದುಗಡೆಯಿರುವ ಬಲಗಡೆಯ ಮೊನೆಗೆ ಗಾಳಿ ಎಂದು, ಎಡ ಪಕ್ಕದ ಮೊನೆಗೆ ಅಗ್ನಿಯೆಂದು, ಹಾಗೆ ಹಿಂದೆ ಇರುವವುಗಳಿಗೆ ನೀರು ಭೂಮಿ ಎಂದು ಗುರುತಿಸಿಕೊಂಡು ಗಾಳಿ ಅಗ್ನಿ ಒಂದು ಕಡೆ ನೀರು ಭೂಮಿ ಒಂದು ಕಡೆ ಮಧ್ಯದಲ್ಲಿ ಅಕಾಶ ಇರುವಂತೆ ಅರ್ಥದಿಂದ ಮಂಟಪವನ್ನು ನಿರ್ಮಿಸುತ್ತಿದ್ದರು. ಹಾಗೆ ನಿರ್ಮಿಸಿದ ಮಂಟಪದ ಸುತ್ತಲೂ ನೋಡುವವರಿಗೆ ಅರ್ಧ ಚಂದ್ರಾಕೃತಿಯಾಗಿ ಕಾಣಿಸುತಿತ್ತು. ಇಂತಹ ಮಂಟಪವನ್ನು ಈಗ ಯಾರೂ ಹಾಕುವಂತಿಲ್ಲ. ತಲಂಬರಗಳವರೆಗೂ ಮಂಟಪದ ಕೆಳಗೇ ಎಲ್ಲ ಕಾರ್ಯಗಳು ನಡೆದ ನಂತರ ಒಂದು ಅರುಂಧತಿ ನಕ್ಷತ್ರ ದರ್ಶನಕ್ಕೆ ಮಾತ್ರವೆ ಮದುವೆ ಮಂಟಪದ ಹೊರಗಡೆ ಬರುತ್ತಿದ್ದರು. ಅಲ್ಲಿಗೆ ಮದುವೆ ಆದಂತೆ ಎಂಬ ಭಾವ ಅಂದರೆ ಮೋಕ್ಷ ಹೊಂದಿದಂತೆ. ಮೋಕ್ಷ ಹೊಂದಿದವರಿಗೆ ಪುನಃ ಜನ್ಮವಿಲ್ಲ. ಆದ್ದರಿಂದ ಮದುವೆ ಮಂಟಪ ಕೆಳಗಿನಿಂದ ಹೊರಗೆ ಬಂದ

ನಂತರ ವಧುವರರು ಮದುವೆ ಮಂಟಪದ ಕೆಳಕ್ಕೆ ಹೋಗುತ್ತಿರಲಿಲ್ಲ. ಅಲ್ಲಿಗೆ ಮದುವೆಕಾರ್ಯ ಭಾವಯುಕ್ತವಾಗಿ ಮುಗಿಸಿದಂತಾಗುತ್ತದೆ.

ಪೂರ್ವಕಾಲದಲ್ಲಿ ಮದುವೆ ಇಂದೂಗಳ ಸಂಪ್ರದಾಯವಾಗಿ ದೇಶವೆಲ್ಲ ವ್ಯಾಪಿಸಿತ್ತು. ಇಂದೂಗಳೆಂದರೆ ಜ್ಞಾನಿಗಳೆಂದು ಅರ್ಥ. ಪೂರ್ವವಿದು ಜ್ಞಾನಿಗಳ ದೇಶವಾದ್ದರಿಂದ ಇಂದೂದೇಶವೆಂಬ ಹೆಸರು ಬಂದಿದೆ. ಕಾಲಕ್ರಮೇಣ ಆಲಿಬೊಟ್ಟು ತಾಳಿಬೊಟ್ಟಾದಂತೆ ಅಜ್ಞಾನ ಬೆಳೆದು ಹೋಗಿ ಇಂದೂದೇಶ ಹಿಂದೂದೇಶವಾಗಿದೆ. ನಾವು ಹಿಂದೂಗಳಾಗಿ ಬದಲಾದರೂ, ಮತ್ತೆ ಕೆಲವರು ಇತರ ಮತಗಳವರಾಗಿ ಬದಲಾವಣೆಯಾದರೂ ಎಲ್ಲರಲ್ಲಿಯೂ ಇಂದೂ ಸಂಪ್ರದಾಯಗಳು ಇಂದಿಗೂ ಅಲ್ಪಸ್ವಲ್ಪ ಉಳಿದುಕೊಂಡಿರುವುದು ನೋಡಿದರೆ ಧರ್ಮಗಳು ಇನ್ನೂ ಕೊನೆಯ ಉಸಿರಿನಿಂದ ಬದುಕಿವೆ ಎನ್ನುವುದಕ್ಕೆ ನಿದರ್ಶನವಾಗಿದೆ. ಈಗಲಾದರೂ ದೈವಜ್ಞಾನ ತಿಳಿದವರಾಗಿ ನಿರ್ಬಲವಾಗಿರುವ ಧರ್ಮಗಳನ್ನು ಭಾವಯುಕ್ತ ಆಚರಣೆಗಳಿಂದ ಪುನಃ ಬಲಗೊಳ್ಳುವಂತೆ ಮಾಡೋಣ. ಧರ್ಮಗಳು ಎಂದಿಗೂ ನಶಿಸುವುದಿಲ್ಲ. ಧರ್ಮಗಳಿಗೆ ಗ್ಲಾನಿ ಮಾತ್ರ ಕಾಲಕ್ರಮವಾಗಿ ಏರ್ಪಡುತ್ತದೆ. ಅವು ಮತ್ತೆ ಪುನರುದ್ಧರಿಸಲ್ಪಡುತ್ತವೆ.



# ಮದುವೆಗೆ ಮುಹೂರ್ತವಾ!

ಮದುವೆ ಕಾರ್ಯಗಳಿಗೆ ಮುಹೂರ್ತಗಳನ್ನು ನಿರ್ಣಯಿಸುವುದು, ಮುಹೂರ್ತಗಳಲ್ಲಿ ಮದುವೆ ಮಾಡಬೇಕೆನ್ನುವುದು ಎಲ್ಲರಿಗೂ ತಿಳಿದಿರುವ ವಿಷಯವೆ. ಮುಹೂರ್ತ ಎಂದರೆ ಏನೆಂದು ತಿಳಿಯದಿದ್ದರೂ ಪುರೋಹಿತರು ನಿರ್ಣಯಿಸಿದ ಕಾಲವನ್ನು ಎಲ್ಲರೂ ಮುಹೂರ್ತ ಎನ್ನುವುದು ನಡೆಯುತ್ತದೆ. ಮುಹೂರ್ತಗಳೆಂದರೆ ಏನೆಂದು ತಿಳಿಯದ ಪ್ರಜೆಗಳಿಗೆ ಮೋಸಮಾಡಿ ನಿಮಗೋಸ್ಕರ ಬಹಳ ಕಷ್ಟಪಟ್ಟು ಮುಹೂರ್ತವನ್ನು ಹುಡುಕಿದ್ದೇನೆಂದು ಹೇಳುವ ಪುರೋಹಿತರೂ ಸಹ ಕೆಲವರು ಇದ್ದಾರೆ. ಮದುವೆ ಮಾಡಿಕೊಳ್ಳುವವರ

ಅವಶ್ಯಕರ್ತೆಯನ್ನು ನೋಡಿ ಹೆಚ್ಚಾಗಿ ಹಣ ತೆಗೆದುಕೊಂಡು ಇಲ್ಲದ ಮುಹೂರ್ತಗಳನ್ನು ನಿರ್ಣಯಿಸುವವರೂ ಸಹ ಇದ್ದಾರೆ. ಕೆಲವರು ಪುರೋ ಹಿತರು ಈ ತಿಂಗಳಲ್ಲಿ ಮುಹೂರ್ತಗಳು ಇಲ್ಲವೆಂದು ಸತ್ಯವನ್ನು ಹೇಳಿದರೂ, ನೀನು ಕೇಳಿದಷ್ಟು ಹಣ ಕೊಡುತ್ತೇವೆ ಕಷ್ಟಪಟ್ಟು ಹುಡುಕಿ ಇಡಬೇಕೆಂದು ಪ್ರಾರ್ಥೇಯಪಡುವ ಪ್ರಜೆಗಳಿದ್ದಾರೆ. ನಾವು ಹೇಳಿದ ಕಾಲಕ್ಕೆ ಮುಹೂರ್ತವನ್ನು ಇಡಬೇಕೆಂದು ಬೆದರಿಸುವವರೂ ಸಹ ಇದ್ದಾರೆ. ಇಲ್ಲದ ಮುಹೂರ್ತವನ್ನು ಇಡಲಾರದೆ ತೊಂದರೆಗೀಡಾದ ಪುರೋಹಿತರು ಕೆಲವರು ಇರುವಾಗ, ಒಂದೇ ದಿನ ನಾಲ್ಕು ಸಮಯಗಳಲ್ಲಿ ನಾಲ್ಕು ಮುಹೂರ್ತಗಳನ್ನು ಇಟ್ಟು ಎಲ್ಲಾ ಮುಹೂರ್ತಗಳಿಗೂ ಹಾಜರಾಗಿ ಮಂತ್ರಗಳು ಓದಿ ಹಣವನ್ನು ತೆಗೆದುಕೊಳ್ಳುವ ಪುರೋ ಹಿತರೂ ಸಹ ಇದ್ದಾರೆ. ಇವುಗಳೆಲ್ಲವನ್ನು ನೋಡಿದರೆ ಯೋಚಿಸುವ ಯಾವ ಮನುಷ್ಯನಿಗಾದರು ಮುಹೂರ್ತವೆಂದರೆ ಏನು ಎಂಬ ಪ್ರಶ್ನೆ ಬಾರದೆ ಇರುವುದಿಲ್ಲ.

ಒಂದು ಇಂದೂ (ಹಿಂದೂ) ಮತದಲ್ಲಿಯೇ ಪಂಚಾಂಗವೆಂದು ಮುಹೂರ್ತಗಳೆಂದು ಹೇಳುವವರಿದ್ದಾರೆ. ಕೆಲವು ಪಂಚಾಂಗಗಳಲ್ಲಿ ಮೊದಲೇ ಮುಹೂರ್ತಗಳು ನಿರ್ಣಯಿಸಿರುತ್ತವೆ. ಕೆಲವು ಪಂಚಾಂಗಗಳಲ್ಲಿ ನಿರ್ಣಯಿಸಿದ ಮುಹೂರ್ತಗಳು ಇಲ್ಲದಿದ್ದರು ಪುರೋಹಿತರು ಕೆಲವು ನಿಯಮಗಳ ಪ್ರಕಾರ ಮುಹೂರ್ತವನ್ನು ನಿರ್ಣಯಿಸುತ್ತಿರುತ್ತಾರೆ. ಗ್ರಹಗಳ ಗತಿಗಳಿಗೆ ಅವುಗಳ ಸ್ಥಾನಗಳಿಗೆ ನಿಯಮಗಳನ್ನು ಏರ್ಪಡಿಸಿ ಇಂತಹ ಕಾಲದಲ್ಲಿ, ಇಂತಹ ಗ್ರಹಗಳು, ಇಂತಹ ಕಡೆ ಇದ್ದಾಗಲೇ ಮುಹೂರ್ತ ಎನ್ನುವುದು ಈಗಿನ ಕಾಲದಲ್ಲಿ ಸಹಜವಾಗಿರುವ ವಿಷಯ. ಗ್ರಹಗಳು ಅವುಗಳ ಸ್ಥಾನಗಳನ್ನನುಸರಿಸಿ ನಿರ್ಣ ಯಿಸಲ್ಪಟ್ಟ ಕಾಲವನ್ನೆ ಮುಹೂರ್ತ ಎಂಬ ನಿಯಮದಿಂದ ಮೊದಲೇ ಮುಹೂರ್ತಗಳನ್ನು ಪಂಚಾಂಗಗಳಲ್ಲಿ ನಿರ್ಣಯಿಸಿರುತ್ತಾರೆ. ಪಂಚಾಂಗಗಳಲ್ಲಿ ಮುಹೂರ್ತಗಳಿರುತ್ತವೆ ಎಂದು ಬಹಳ ಜನರಿಗೆ ತಿಳಿದಿರುತ್ತದೆ. ಇದರಿಂದ ಮುಹೂರ್ತಗಳು ಎಂದರೆ ಪಂಚಾಂಗಗಳೆಂದು ಪಂಚಾಂಗಗಳೆಂದರೆ ಮುಹೂರ್ತ

ಗಳೆಂದು ಎನ್ನುವವರು, ಮುಹೂರ್ತವು ಪಂಚಾಂಗದಲ್ಲಿನ ಅಂತರ್ಭಾಗ ಎನ್ನುವವರಿದ್ದಾರೆ. ಮುಹೂರ್ತಗಳು ಒಂದು ಮದುವೆಗೆ ಅಲ್ಲದೆ ಗೃಹಾರಂಭಕ್ಕು, ಗೃಹಪ್ರವೇಶಕ್ಕು, ಡೋಲಾರೋಹಣೆಗೂ, ಕೇಶಖಂಡನೆಗೂ, ಶೋಭನಕ್ಕು, ನಾಮಕರಣಕ್ಕು ಮೊದಲಾದ ಬಹಳ ಕಾರ್ಯಗಳಿಗೆ ಇವೆ. ಎಲ್ಲವುಗಳಿಗೂ ಪಂಚಾಂಗದಲ್ಲಿಯೇ ಮುಹೂರ್ತಗಳು ದೊರಕುತ್ತವೆ. ಪಂಚಾಂಗ ತಿಳಿದವರ್ಯಾರಾದರೂ ಮುಹೂರ್ತವನ್ನು ನಿರ್ಣಯಿಸುತ್ತಿದ್ದಾರೆ. ಇದೆಲ್ಲವೂ ನೋಡಿದ ನಂತರ ಇಂದೂ ಮತದಲ್ಲಿ ಸಾಂಪ್ರದಾಯ ಎಂಬ ಹೆಸರಿಂದ ಕ್ಷೀಣಿಸಿಹೋದ ಮುಹೂರ್ತವನ್ನು ಕುರಿತು ಸ್ವಲ್ಪ ತಿಳಿಸಬೇಕೆಂದುಕೊಂಡಿದ್ದೇವೆ. ಶಾಸ್ತ್ರಗಳಲ್ಲಿ ನಾಲ್ಕನೆಯದಾದ ಖಗೋಳಶಾಸ್ತ್ರದ ಪ್ರಕಾರ ಹುಟ್ಟಿರುವುದು ಪಂಚಾಂಗ. ಐದನೆಯದಾದ ಜೋತಿಷ್ಯಶಾಸ್ತ್ರದ ಪ್ರಕಾರ ಹುಟ್ಟಿರುವುದು ಮುಹೂರ್ತ. ಪಂಚಾಂಗ ಕರ್ತರು ಖಗೋಳಶಾಸ್ತ್ರವನ್ನು ಅನುಸರಿಸಿ ಪಂಚಾಂಗಗಳನ್ನು ಬರೆಯುತ್ತಿರುತ್ತಾರೆ. ಮುಹೂರ್ತವನ್ನು ನಿರ್ಣಯಿಸುವವರು ಜೋತಿಶಾಸ್ತ್ರವನ್ನು ಅನುಸರಿಸಿ ಹೋಗಬೇಕಾಗಿರುತ್ತದೆ. ಪ್ರಸ್ತುತ ಕಾಲದಲ್ಲಿ ಪಂಚಾಂಗ ತಿಳಿದವರೆಲ್ಲರೂ ಜೋತಿಷ್ಯರಂತೆ ಚಲಾವಣೆಯಾಗುತ್ತಿದ್ದಾರೆ. ವಾಸ್ತವಕ್ಕೆ ಜೋತಿಷ್ಯರು ಶಾಸ್ತ್ರಬದ್ದತೆ ಇಲ್ಲದ ಜೋತಿಷ್ಯವನ್ನು ಹೇಳುತ್ತಿದ್ದಾರೆ. ಒಂದು ಕಡೆ ಜೋತಿಷ್ಯಶಾಸ್ತ್ರದ ಪ್ರಕಾರ ಹೇಳಿದ ವಿಷಯವನ್ನು ಅದೇ ಶಾಸ್ತ್ರದ ಪ್ರಕಾರ ಮತ್ತೊಂದು ಕಡೆ ಮೊದಲು ಹೇಳಿರುವುದಕ್ಕೆ ವಿರುದ್ಧವಾಗಿ ಹೇಳುತ್ತಿದ್ದಾರೆ. ಶಾಸ್ತ್ರ ಎಂದರೆ ಒಂದೇ ವಿಧಾನವನ್ನು ಸೂಚಿಸುವುದಾಗಿ, ಶಾಸನಗಳಿಂದ ಕೂಡಿಕೊಂಡಿರುವುದಾಗಿ, ಎಂದಿಗೂ ಖಂಡಿಸಲ್ಪಡದಿರುವುದಾಗಿ, ಶಾಪಗಳಂತೆ ತಪ್ಪದೆ ನೇರವೇರುವುದಾಗಿರುವುದೆಂದು ಅರ್ಥ. ಶಾಸನ ಎಂಬ ಪದದಿಂದ ಹುಟ್ಟಿರುವುದು ಶಾಸ್ತ್ರವಾದಾಗ ಅದು ಎಂದಿಗೂ ಬದಲಾಗುವುದಲ್ಲ. ಒಂದು ವೇಳೆ ಎಂದಿಗಾದರು ಬದಲಾಗುವುದಾದರೆ ಅದು ಶಾಸ್ತ್ರ ಅಲ್ಲ. ಅಸಲಾದ ಖಗೋಳ ಶಾಸ್ತ್ರದ ಪ್ರಕಾರ ತಿಥಿಗಳನ್ನು, ನಕ್ಷತ್ರಗಳನ್ನು, ವಾರಗಳನ್ನು ಗ್ರಹಗಳ ಗತಿಗಳನ್ನು ಹೇಳಬಹುದು. ಭವಿಷತ್ತನ್ನು ಹೇಳುವುದಕ್ಕೆ ಅವಕಾಶವಿಲ್ಲ. ಭವಿಷತ್ತನ್ನು ಹೇಳುವುದಕ್ಕೆ ಪ್ರತ್ಯೇಕವಾದ ಐದನೆಯ ಶಾಸ್ತ್ರವಾದ ಜೋತಿಷ್ಯ

ಶಾಸ್ತ್ರವನ್ನು ತಿಳಿದಿರಬೇಕು. ಖಗೋಳಶಾಸ್ತ್ರದ ಪ್ರಕಾರ ಇರುವ ಪಂಚಾಂಗದಲ್ಲಿ ಗ್ರಹಗಳ ಗತಿಗಳನ್ನು ನೋಡಿ ಜೋತಿಷ್ಯ ಶಾಸ್ತ್ರದ ಮೂಲಕ ಭವಿಷ್ಯತ್ತನ್ನು ಹೇಳಬಹುದು. ಜೋತಿಷ್ಯರಿಗೆ ಖಗೋಳಶಾಸ್ತ್ರವು ತಿಳಿದಿರಬೇಕಾದ ಕೆಲಸ ಇಲ್ಲ. ಖಗೋಳಶಾಸ್ತ್ರದ ಪ್ರಕಾರ ಬರೆಯಲಾದ ಪಂಚಾಂಗಗಳನ್ನು ನೋಡಿ ಗ್ರಹಗಳ ಗತಿಗಳನ್ನು ತಿಳಿದುಕೊಂಡು ಜೋತಿಷ್ಯರು ಬೇಕಾದ ಭವಿಷ್ಯತ್ತನ್ನು ಕುರಿತು ತಿಳಿದುಕೊಳ್ಳಬಹುದು.

ಪಂಚಾಂಗದ ಪ್ರಕಾರ ಗ್ರಹಗಳ ಗತಿಗಳಿರುತ್ತವೆಂದು ಅಂದುಕೊಂಡಿದ್ದೇವಲ್ಲವೆ! ಗೋಳವಾದ ಭೂಮಿ ದಿನಕ್ಕೆ ಒಂದುಬಾರಿ ತನ್ನ ಸುತ್ತಲೂ ತಾನು ತಿರುಗುತ್ತಿರುವುದರಿಂದ ಸೂರ್ಯನು ಭೂಮಿಯನ್ನು ಒಂದು ಬಾರಿ ಸುತ್ತಿಬಂದಂತೆ ಭೂಮಿ ಮೇಲಿರುವ ನಮಗೆ ತಿಳಿಯುತ್ತದೆ. ಅದರಿಂದ ಭೂಮಿಯನ್ನು ಹನ್ನೆರಡು ಭಾಗಗಳಾಗಿ ವಿಭಜಿಸಿ ಒಂದು ದಿನಕ್ಕೆ ಸೂರ್ಯನು ಹನ್ನೆರಡು ಭಾಗಗಳನ್ನು ದಾಟಿದಂತೆ ಲೆಕ್ಕಿಸುತ್ತಿದ್ದೇವೆ. ಉದಾಹರಣೆಗೆ ನಾವು ಒಂದು ರೈಲಿನಲ್ಲಿ ಪ್ರಯಾಣಿಸುತಿದ್ದೇವೆಂದುಕೊಳ್ಳೋಣ. ರೈಲುಬಂಡಿಗೆ ಹನ್ನೆರಡು ಬೋಗಿಗಳಿವೆ ಅಂದುಕೊಳ್ಳೋಣ. ರೈಲು ರಸ್ತೆ ಪಕ್ಕದಲ್ಲಿ ಒಂದು ದೊಡ್ಡ ಅರಳಿ ಗಿಡ ಇದೆ ಅಂದುಕೊಳ್ಳೋಣ. ರೈಲು ಮರದ ಪಕ್ಕದಲ್ಲಿ ಪ್ರಯಾಣಿಸುವಾಗ ರೈಲಿನಲ್ಲಿ ಕುಳಿತುಕೊಂಡು ನೋಡುವವನಿಗೆ ದಾರಿ ಪಕ್ಕದಲ್ಲಿರುವ ಅರಳಿ ಮರ ವೇಗವಾಗಿ ಹಿಂದಕ್ಕೆ ಹೋದಂತೆ ಕಾಣಿಸುತ್ತದೆ. ಆದರೆ ವಾಸ್ತವಕ್ಕೆ ಮರ ಕದಲಲಿಲ್ಲ, ರೈಲು ಕದಲುತ್ತಿದೆ. ಆದರೂ ಮರ ಕದಲಿದಂತೆ ಕಾಣಿಸುತ್ತದೆ. ಅದೇ ವಿಧವಾಗಿ ಖಗೋಳದಲ್ಲಿ ಸೂರ್ಯನು ದಾರಿ ಪಕ್ಕದಲ್ಲಿ ಕದಲದ ಅರಳಿಗಿಡದಂತೆ ಕದಲದಂತಿರುವ ಗ್ರಹ. ಭೂಮಿ ಕದಲುತ್ತಿರುವ ರೈಲಿನಂತೆ ಅರಳಿ ಮರವನ್ನು ದಾಟಿಹೋದಂತೆ ಸೂರ್ಯನ ಸುತ್ತಾ ಪ್ರಯಾಣಿಸುತ್ತಿದೆ. ರೈಲಿನಲ್ಲಿ ಕುಳಿತುಕೊಂಡವರಿಗೆ ಮರ ಕದಲಿಹೋದಂತೆ ಕಾಣಿಸಿದ ರೀತಿಯಲ್ಲಿ ಭೂಮಿ ಮೇಲಿರುವ ನಮಗೆ ಸೂರ್ಯನೆ ಕದಲಿಹೋದಂತೆ ಕಾಣಿಸುತ್ತಿದೆ. ವಾಸ್ತವಕ್ಕೆ ಸೂರ್ಯನು ಕದಲಲಿಲ್ಲ. ರೈಲಿಗೆ ಹನ್ನೆರಡು ಬೋಗಿಗಳು

ಇವೆಯೆಂದುಕೊಂಡಿದ್ದೇವಲ್ಲ! ಒಂದೊಂದು ಭೋಗಿ ಉದ್ದ, ರೈಲಿನ ವೇಗವನ್ನು, ಮರದ ಸ್ಥಾನವನ್ನು ಲೆಕ್ಕ ಹಾಕಿ ನೋಡಿದರೆ ರೈಲು ಒಟ್ಟು ಮರವನ್ನು ದಾಟುವುದಕ್ಕೆ ಎಷ್ಟು ಕಾಲ ಬೇಕಾಗುತ್ತದೆಂದು, ಒಂದು ಬೋಗಿ ದಾಟುವುದಕ್ಕೆ ಎಷ್ಟುಕಾಲ ಬೇಕಾಗುತ್ತದೆಂದು ತಿಳಿಯುತ್ತದೆ. ಹಾಗೆ ಭೂಮಿಗಿರುವ ಹನ್ನೆರಡು ಭಾಗಗಳ ಉದ್ದವನ್ನು ಭೂಮಿ ವೇಗವು ಲೆಕ್ಕಿಸಿ ನೋಡಿದರೆ ಒಂದೊಂದು ಭಾಗ ಸೂರ್ಯನನ್ನು ದಾಟುವುದಕ್ಕೆ ಎಷ್ಟು ಸಮಯ ಬೇಕಾಗುತ್ತದೆಂದು ತಿಳಿಯುತ್ತದೆ. ಇದರ ಪ್ರಕಾರ ಭೂಮಿ ಒಂದೊಂದು ಭಾಗ ಸೂರ್ಯನನ್ನು ದಾಟುವುದಕ್ಕೆ ಸಗಟಿಗೆ ಎರಡು ಗಂಟೆಗಳು ಬೇಕಾಗುತ್ತದೆ. ಹನ್ನೆರಡು ಭಾಗಗಳು ದಾಟುವುದಕ್ಕು 24 ಗಂಟೆಗಳು ಬೇಕಾಗುತ್ತದೆ. ನಾವು ಭೂಮಿ ಮೇಲಿರುವವರು ಆದ್ದರಿಂದ ಸೂರ್ಯನೆ ಪ್ರಯಾಣಿಸಿದಂತೆ ಲೆಕ್ಕಿಸಿಕೊಂಡಂತಾದರೆ ಸೂರ್ಯನು ಭೂಮಿಯ ಒಂದು ಭಾಗವನ್ನು ದಾಟುವುದಕ್ಕೆ ಎರಡು ಗಂಟೆಗಳ ಕಾಲವು ಬೇಕಾಗುತ್ತದೆ ಎಂದು ತಿಳಿಯುತ್ತದೆ. ಆ ಎರಡು ಗಂಟೆಗಳ ಕಾಲವನ್ನು ಲಗ್ನ ಎನ್ನುತ್ತಿದ್ದೇವೆ. ಸೂರ್ಯನು ಭೂಮಿಯ ಒಂದು ಭಾಗದ ಮೊದಲಿನಿಂದ ಕೊನೆಯವರೆಗೂ ಪ್ರಯಾಣಿಸುವಾಗ ಬೇಕಾಗುವ ಕಾಲವನ್ನು ಲಗ್ನ ಎಂದು ಹೇಳುವುದು ವಾಸ್ತವ.

ಉದಾಹರಣೆ ಪ್ರಕಾರ ನಾವಂದುಕೊಂಡ ರೈಲಿಗಿರುವ ಒಂದೊಂದು ಬೋಗಿ ಒಂದು ಕಿಲೋಮೀಟರ್ ಉದ್ದವಿದೆಯೆಂದುಕೊಳ್ಳೋಣ. ರೈಲಿನ ವೇಗವು ಗಂಟೆಗೆ ಅರ್ಧಕಿಲೋಮೀಟರ್ ಎಂದುಕೊಳ್ಳೋಣ. ಒಂದು ಕಿಲೋಮೀ ಟರ್ ಉದ್ದವಿರುವ ಬೋಗಿ ಮರವನ್ನು ದಾಟುವುದಕ್ಕೆ ಎರಡು ಗಂಟೆಗಳ ಕಾಲ ಬೇಕಾಗುತ್ತದೆ. ಒಂದು ಬೋಗಿ ಮರವನ್ನು ದಾಟುವ ಎರಡು ಗಂಟೆಗಳಲ್ಲಿ ಆ ಭೋಗಿಯಿಂದ ಒಂದು ಮೂಟೆ ಕೆಳಗೆ ಬಿದ್ದುಹೋಗಿದೆ ಎಂದುಕೊಳ್ಳೋಣ. ಆ ಎರಡು ಗಂಟೆಗಳಲ್ಲಿ ಮೂಟೆ ಬಿದ್ದುಹೋದ ಸಮಯವನ್ನು ಪ್ರತ್ಯೇಕವಾಗಿ ಹೇಳುತ್ತೇವೆ. ರೈಲಿನಿಂದ ಒಂದು ಮೂಟೆ ಬಿದ್ದುಹೋದ ಸಮಯವನ್ನು ಪ್ರತ್ಯೇಕವಾಗಿ ಗುರುತಿಸಿದಂತೆ ಸೂರ್ಯನನ್ನು ದಾಟುವ ಎರಡು ಗಂಟೆಗಳ ಲಗ್ನದಲ್ಲಿ ಒಂದು ಕಾರ್ಯ ನಡೆದ ಸಮಯವನ್ನು ಪ್ರತ್ಯೇಕಿಸಿ ಹೇಳುತ್ತಿದ್ದೇವೆ.

ಆ ಸಮಯವನ್ನೇ ಮುಹೂರ್ತ ಎನ್ನುತ್ತಿದ್ದೇವೆ. ಇದರಿಂದ ಒಂದು ಲಗ್ನದಲ್ಲಿ ಮುಹೂರ್ತ ಇರುತ್ತದೆ ಎಂದು, ಮುಹೂರ್ತ ಬೇರೆ, ಲಗ್ನ ಬೇರೆ ಎಂದು ತಿಳಿಯುತ್ತದೆ. ಲಗ್ನ ಖಗೋಳ ಸಂಬಂಧವಾದುದು. ಮುಹೂರ್ತ ಜ್ಯೋತಿಷ್ಯ ಸಂಬಂಧವಾದುದು.

ಮಾನವ ಜೀವನದಲ್ಲಿ ಯಾವಾಗ ಯಾವ ಕಾರ್ಯ ನಡೆಯಬೇಕಾಗಿರುವುದು ಪ್ರಾರಬ್ಧ ಕರ್ಮ ಪ್ರಕಾರ ಮೊದಲೇ ನಿರ್ಣಯಿಸಲ್ಪಟ್ಟಿರುತ್ತದೆ. ಮೂಟೆ ಪ್ರಯಾಣದಲ್ಲಿ ಬಿದ್ದುಹೋಗಿರುವುದು ಒಂದು ಸಮಯವಾದಂತೆ ಜೀವನದಲ್ಲಿ ಒಂದು ಕಾರ್ಯನಡೆದಿರುವುದು ಒಂದು ಮುಹೂರ್ತ ಆಗುತ್ತದೆ. ಮಾನವ ಜೀವನದಲ್ಲಿ ಯಾವ ಕಾರ್ಯವು ಯಾವಾಗ ನಡೆಯಬೇಕೆಂಬ ನಿರ್ಣಯವು ಮನುಷ್ಯ ಹುಟ್ಟಿದಾಗಲೇ ನಿರ್ಣಯಿಸಲ್ಪಟ್ಟಿರುತ್ತದೆ. ಅದನ್ನೇ ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜಾತಕ ಎನ್ನುತ್ತಿದ್ದೇವೆ. ಯಾರ ಜಾತಕದಲ್ಲಾದರೂ ಎಲ್ಲಾ ಕಾರ್ಯಗಳಿಗೂ ಮುಹೂರ್ತಗಳು ಮೊದಲೆ ನಿರ್ಣಯಿಸಲ್ಪಟ್ಟಿರುತ್ತದೆ. ಅದರ ಪ್ರಕಾರ ನಡದೇ ತೀರುತ್ತದೆ. ಪ್ರಾರಬ್ಧಕರ್ಮ ನಿರ್ಣಯವು ಮಾನವನು ಹುಟ್ಟಿದಾಗಲೇ ನಡೆಯುತ್ತದೆಂದು, ಅದನ್ನೇ ಜಾತಕ ಎಂದು, ಅದು ಯಾರಾಗಲಿ ಅನುಭವಿಸದೆ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲವೆಂದು ಆರನೆಯ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವೂ ಸಹ ತಿಳಿಸುತ್ತದೆ. ಜ್ಯೋತಿಷ್ಯದ ಮುಖಾಂತರ ನಡೆಯಬೇಕಾದ ಕಾರ್ಯವನ್ನು ತಿಳಿದುಕೊಳ್ಳಬಹುದು, ಆದರೆ ಆ ಕಾರ್ಯದಿಂದ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವಿಲ್ಲ. ಇದರಿಂದ ಮನುಷ್ಯ ಮುಹೂರ್ತಗಳನ್ನು ನಿರ್ಣಯಿಸಲಾರನು, ಪ್ರಾರಬ್ಧ ಕರ್ಮ ಮೊದಲೇ ಎಲ್ಲಾ ಮುಹೂರ್ತಗಳನ್ನು ನಿರ್ಣಯಿಸಿ ಇಟ್ಟಿದೆಯೆಂದು ತಿಳಿಯುತ್ತದೆ.

ಲಗ್ನವೆಂದರೆ ಏನು? ಮುಹೂರ್ತವೆಂದರೆ ಏನು? ಎಂದು ತಿಳಿದುಕೊಂಡ ನಂತರ, ಲಗ್ನಕ್ಕೆ ಗ್ರಹಗಳು, ಮುಹೂರ್ತಕ್ಕೆ ಪ್ರಾರಬ್ದಕರ್ಮ ಕಾರಣವೆಂದು ತಿಳಿದ ನಂತರ, ಇಂತಹ ಕಾರ್ಯಕ್ಕೆ ಮುಹೂರ್ತ ನಿರ್ಣಯಿಸುತ್ತೇನೆಂದು, ಆ ಸಮಯದಲ್ಲಿಯೇ ಆ ಕೆಲಸಗಳು ನಡೆಯ ಬೇಕೆಂದು

ಹೇಳುವುದು ಅಜ್ಞಾನವೇ ಆಗುತ್ತದೆ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ಯಲ್ಲಿನ ಸಾಂಖ್ಯಯೋಗ 47ನೇ ಶ್ಲೋಕದಲ್ಲಿ **"ಕರ್ಮಣ್ಯೇ ವಾಧಿಕಾರಸ್ತೇ"** ಎಂಬ ಶ್ಲೋಕದ ಪ್ರಕಾರ **ಪಾಪ ಪುಣ್ಯ ಕರ್ಮಗಳನ್ನು ಸಂಪಾದಿಸಿಕೊಳ್ಳುವುದರಲ್ಲಿ ನಿನಗೆ ಅಧಿಕಾರವಿದೆ, ಆದರೆ ಅವುಗಳ ಫಲಿತವಾದ ಕಾರ್ಯಗಳು ಮಾಡುವುದರಲ್ಲಿ ನಿನಗೆ ಯಾವ ಸಂಬಂಧವಿಲ್ಲವೆಂದು ಭಗವಂತನ ವಾಕ್ಯವಿದೆ.** ಭಗವಂತನ ಮಾತಿಗೆ ವಿರುದ್ಧವಾಗಿ ಯಾರಾದರೂ ಇಂತಹ ಸಮಯದಲ್ಲಿಯೇ ಇಂತಹದ್ದೆ ಕೆಲಸ ಮಾಡುತ್ತೇನೆ ಎನ್ನುವುದು ಅಜ್ಞಾನವೇ ಆಗುತ್ತದೆ. ಕೆಲಸಗಳಿಗೆ ಮಾನವನು ಸ್ವತಂತ್ರನು ಅಲ್ಲದಿರುವಾಗ ಮನುಷ್ಯ ಒಂದು ಕೆಲಸಕ್ಕೆ ಮೊದಲೇ ಮುಹೂರ್ತವನ್ನು ನಿರ್ಣಯಿಸುವುದು ಎಷ್ಟೋ ತಿಳಿಯದತನವಾಗುತ್ತದೆ. ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಕೆಲಸ ನಡೆಯುತ್ತದೆ ಎಂದು ಮೊದಲೇ ಹೇಳಬಹುದು. ಆದರೆ ನಡೆಸುತ್ತೇವೆಂದು ಹೇಳುವುದು ತಿಳಿಯದತನವಾಗುತ್ತದೆ. ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಒಂದು ಮದುವೆ ಯಾವಾಗ ನಡೆಯುತ್ತದೋ ಮೊದಲೇ ಕರ್ಮ ನಿರ್ಣಯದಲ್ಲಿ ಇರುತ್ತದೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ಕರ್ಮನಿರ್ಣಯದಲ್ಲಿ ನಡೆಯಬೇಕಾದ ಮದುವೆ ಕಾರ್ಯದ ವಿವರವನ್ನು ತಿಳಿದುಕೊಳ್ಳಬಹುದು. ಇವೆರಡೂ ಅಲ್ಲವೆಂದು ಕರ್ಮವನ್ನು ದೃಷ್ಟಿಯಲ್ಲಿಟ್ಟುಕೊಳ್ಳದೆ ಕರ್ಮಕ್ಕೆ ಕರ್ತರಾದಂತೆ ಮದುವೆಗೆ ಮುಹೂರ್ತಗಳು ಇಡಬಾರದು. ಹಾಗೆ ಮಾಡುವುದು ಅಧರ್ಮವಾಗುತ್ತದೆ. ಆದ್ದರಿಂದ ಪೂರ್ವಕಾಲದಲ್ಲಿ ಮದುವೆಗೆ ಮುಹೂರ್ತ ಗಳಿಡುತ್ತಿರಲಿಲ್ಲ. ಮುಹೂರ್ತ ಇಲ್ಲದೆ ಮದುವೆ ಮಾಡಿಕೊಳ್ಳುವುದು ಆ ದಿನದ ಸಂಪ್ರದಾಯ. ಕೆಲವು ಸ್ಥಳಗಳಲ್ಲಿ ಮುಹೂರ್ತ ಇಲ್ಲದೆ ಈ ದಿನಗಳಲ್ಲಿಯೂ ಸಹ ಮದುವೆಗಳು ನಡೆಯುತ್ತಿವೆ. ಹಾಗೆ ಮುಹೂರ್ತಗಳು ಇಲ್ಲದೆ ಮದುವೆ ನಡೆಯುವುದರಿಂದ ಇಂದೂ ಸಾಂಪ್ರದಾಯಗಳು ಇಂದಿಗೂ ನಶಿಸದೆ ನಿಂತಿವೆಯೆಂದು ಹೇಳುವುದಕ್ಕೆ ಆಧಾರವಾಗಿದೆ. ಮದುವೆಗೆ ಮುಹೂರ್ತಗಳು ಇರಬಾರದೆಂಬ ಭಾವದಿಂದ ಪೂರ್ವದ ಜ್ಞಾನಿಗಳು ಒಂದು ವಾಕ್ಯವನ್ನು ಪ್ರಚಾರ ಮಾಡಿದ್ದಾರೆ. **"ನಿತ್ಯಕಲ್ಯಾಣ ಹಸಿರು ತೋರಣ"** ಎಂದು ಹೇಳಿದ್ದಾರೆ. ಹಸಿರು ತೋರಣವನ್ನು ಕಟ್ಟಿ ನಿತ್ಯವು ಕಲ್ಯಾಣ ಮಾಡಬಹುದೆಂದು, ಕಲ್ಯಾಣಕ್ಕೆ

ಮುಹೂರ್ತಗಳು ಇರುವುದಿಲ್ಲ ಎಂದು ಅವರ ಭಾವ. ಕರ್ಮ ಆಚರಣೆಗೆ ಬಂದರೆ ಅಮಾವಾಸ್ಯೆ ದಿನವಾದರೂ ಮದುವೆ ನಡೆಯುತ್ತದೆ ಎಂದು ಅವರ ಭಾವ.

"ಈಗಿನ ಕಾಲದಲ್ಲಿಯೂ ಸಹ ತಿರುಪತಿ ಕ್ಷೇತ್ರದಲ್ಲಿ, ಮತ್ತೆ ಕೆಲವು ದೇವಸ್ಥಾನಗಳಲ್ಲಿ ಮುಹೂರ್ತಗಳು ಇಲ್ಲದೆ ನಿತ್ಯವು ಮದುವೆಗಳು ನಡೆಯುತ್ತವೆ. ನಾವು ನಮ್ಮ ಸಮಕ್ಷಮದಲ್ಲಿ ನಡೆಸಿರುವ ಮದುವೆಗಳಿಗೆಲ್ಲ ಮುಹೂರ್ತವನ್ನು ನಿರ್ಣಯಿಸದೆ ಮಾಡಿದ್ದೇವೆ. ಮುಹೂರ್ತ ಇಲ್ಲದೆ ಕಾರ್ಯವನ್ನು ಕರ್ಮಕ್ಕೆ ಬಿಡುವುದು ಜ್ಞಾನವಾಗುತ್ತದೆ. ಆದ್ದರಿಂದ **ಮುಹೂರ್ತಗಳು ಇಲ್ಲದ ಮದುವೆ ಇಂದೂ ಸಾಂಪ್ರದಾಯವಾಗುತ್ತದೆ.** ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ಬಂದು ಸೇರುವುದರಿಂದ ತಾತ್ಕಾಲಿಕವಾಗಿ ಧರ್ಮಗಳಿಗೆ ಗ್ಲಾನಿ ಏರ್ಪಟ್ಟಿದೆ ಎಂದು ತಿಳಿಯುತ್ತದೆ. ತಿಳಿಯದಂತೆ ಹೋಗಿರುವ ಧರ್ಮಗಳು ಮತ್ತೆ ತಿಳಿಯಲ್ಪಟ್ಟು ಧರ್ಮಸಂಸ್ಥಾಪನೆ ನಡೆಯುತ್ತದೆಂದು ಹೇಳಿದ ಭಗವಂತನ ವಾಕ್ ಪ್ರಕಾರ ಎಲ್ಲಾ ಇಂದೂ (ಜ್ಞಾನ) ಸಾಂಪ್ರದಾಯಗಳು ನಮಗೆ ತಿಳಿಯುತ್ತವೆ ಎಂದು ಆಶಿಸೋಣ.



# ಮದುವೆಯಲ್ಲಿ ವೇದ ಮಂತ್ರಗಳಾ!

ಮಾನವ ಜೀವನದಲ್ಲಿ ನಡೆಯುವ ಎಲ್ಲಾ ಶುಭಕಾರ್ಯಗಳಿಗಿಂತಲೂ ಮದುವೆ ಅತ್ಯುತ್ತಮವಾದುದು. ಎಂತಹ ಅಜ್ಞಾನಿ ಜೀವನದಲ್ಲಾದರೂ ದೈವ ಸೂಚನೆಗಳು ಕೊಡುವ ಒಂದೇ ಒಂದು ದೊಡ್ಡ ಕಾರ್ಯ ಮದುವೆ. ಭೂಮಿ ಮೇಲೆ ಯಾವ ಜಾತಿಯ ಜೀವರಾಶಿಗಳಿಗೂ ಇಲ್ಲದ ಮದುವೆ ಒಂದು ಮಾನವ ಜೀವನದಲ್ಲಿಯೇ ಇರುವುದು ಬಹಳ ದೊಡ್ಡ ವಿಷಯ. ಮನುಷ್ಯ ದೈವಮಾರ್ಗದಲ್ಲಿ ಪ್ರವೇಶಿಸುವುದಕ್ಕೆ ದ್ವಾರದಂತಿರುವುದು ಮದುವೆ. ದೈವ ಸೂಚನೆಗಳು ಹೊರತು ಬೇರೆ ಯಾವ ಸಮಾಚಾರವು ಇಲ್ಲದ ಮದುವೆ

ಕಾರ್ಯ ಪವಿತ್ರವಾದುದು. ಪೂರ್ವದಲ್ಲಿ ಎಷ್ಟೋ ಒಳ್ಳೆಯ ಉದ್ದೇಶದಿಂದ ಪ್ರಾರಂಭಿಸಿದ ಮದುವೆ ಈದಿನ ಮಾಯಾ ಪ್ರಭಾವದಲ್ಲಿ ಸಿಲಿಕಿಕೊಂಡಿದೆ. ಮಾನವನ ತಲೆಯಲ್ಲಿರುವ ಮಾಯೆ ಮಾನವನಿಗೆ ಮದುವೆಯ ಪವಿತ್ರತೆಯನ್ನು ತಿಳಿಯದಂತೆ ಮಾಡಿದೆ. ಮಾಯೆಯ ಪ್ರಭಾವದಿಂದ ಮದುವೆ ಅರ್ಥವಿಲ್ಲದ ಕಾರ್ಯವಾಗಿ ಬದಲಾವಣೆಯಾಗಿದೆ. ಅಷ್ಟೇ ಅಲ್ಲದೆ ವೇದಮಂತ್ರಗಳು ಮದುವೆ ಕಾರ್ಯದಲ್ಲಿ ಸ್ಥಳ ಮಾಡಿಕೊಂಡಿವೆ. ಮದುವೆ ಕಾರ್ಯದಲ್ಲಿ ವೇದಮಂತ್ರಗಳು ಇರುವುದು ಒಳ್ಳೆಯದೆ ಆಗಲಿ ಮಾಯೆ ಹೇಗೆ ಆಗುತ್ತದೆ ಎಂದು ಬಹಳ ಜನರಿಗೆ ಸಂಶಯ ಬರುತ್ತದೆ. ಈ ಮಾತುಗಳು ಬರೆದ ಈತನಿಗೆ ವೇದಗಳ ದೊಡ್ಡತನ ತಿಳಿದಿಲ್ಲ ಎಂದುಕೊಳ್ಳಬಹುದು. ಇಂದೂಗಳಿಗೆ ವೇದಗಳು ಪವಿತ್ರ ಗ್ರಂಥಗಳಲ್ಲವೆ ಎಂದು ಕೇಳಬಹುದು. ಈ ವಿಧವಾಗಿ ಯಾರು ಏನೆಂದುಕೊಂಡರು ನಮ್ಮ ಮಾತುಗಳು ಶಾಸ್ತ್ರೀಯವಾದವುಗಳಾ ಅಶಾಸ್ತ್ರೀಯವಾದವುಗಳಾ ಎಂದು, ವೇದಗಳು ಬ್ರಹ್ಮವಿದ್ಯಾಶಾಸ್ತ್ರಕ್ಕೆ ಸಂಬಂದಿಸಿರುವವಾ ಅಲ್ಲವಾ ಎಂದು, ವೇದ ಗಳಿಂದ ದೈವತ್ವವು ಲಭಿಸುತ್ತದಾ ಇಲ್ಲವಾ ಎಂದು ಯೋಚಿಸಬೇಕಾದ ಅವಶ್ಯಕತೆ ಇದೆ.

ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ಸಾಂಖ್ಯಯೋಗದಲ್ಲಿ 45ನೇ ಶ್ಲೋಕದಲ್ಲಿ **"ತ್ರೈಗುಣ್ಯ ವಿಷಯಾ ವೇದಾ"** ಎಂಬ ವಾಕ್ಯದ ಪ್ರಕಾರ, ನಂತರ ಗೀತೆಯಲ್ಲಿಯೇ ವಿಜ್ಞಾನ ಯೋಗ 14ನೇ ಶ್ಲೋಕದಲ್ಲಿ **"ಗುಣ ಮಯಿ ಮಮ ಮಾಯಾ"** ಎಂಬ ವಾಕ್ಯದ ಪ್ರಕಾರ, ನಂತರ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿ **"ನ ವೇದ ಏವಂ ರೂಪ ಶ್ಯಕ್ಯ"** ಎಂಬ ವಾಕ್ಯದ ಪ್ರಕಾರ. 53ನೇ ಶ್ಲೋಕದಲ್ಲಿ **"ನಾಹಂ ವೇದ್ಯೆ ಶಕ್ಯ ಏವಂ ವಿದೋ"** ಎಂಬ ವಾಕ್ಯದ ಪ್ರಕಾರ ವಿಶದೀಕರಿಸಿಕೊಂಡು ನೋಡಿದರೆ ವೇದಗಳೆಂದರೆ ಏನೋ ತಿಳಿದುಹೋಗುತ್ತದೆ.

ದೇವರ ವಿರುದ್ಧ ದಿಕ್ಕಿನಲ್ಲಿ ಇರುವುದು ಮಾಯೆ. ಮಾಯೆಯನ್ನು ಇತರ ಮತಗಳಲ್ಲಿ ಸಾತಾನ್ ಎಂದು ಸೈತಾನ್ ಎಂದು ಹೆಸರಿಟ್ಟು

ಹೇಳಿಕೊಂಡಿದ್ದಾರೆ. ಇತರ ಮತಗಳಲ್ಲಿ ದೇವರ ಮಾರ್ಗಕ್ಕೆ ಮಾಯೆ ಪೂರ್ತಿ ಶತ್ರುವಿನಂತಹದ್ದೆಂದು ಅದಕ್ಕೆ ವಿರುದ್ಧವಾಗಿ ದೇವರ ಮೇಲೆ ವಿಶ್ವಾಸ ಇರುವವರು ಇರಬೇಕೆಂದು ಹೇಳುಕೊಳ್ಳುತ್ತಾರೆ. ಹಿಂದೆ ಬಂದಿರುವ ಮತಗಳಲ್ಲಿಯೂ ಸಹ ದೇವರ ಮಾರ್ಗದಲ್ಲಿರುವವರು ಮಾಯೆಯನ್ನು ವಿರೋಧಿಸುತ್ತಿರುವಾಗ ಸೃಷ್ಟಿ ಆದಿಯಿಂದಿರುವ ಇಂದೂ ಮತದಲ್ಲಿಯು ಸಹ ಮಾಯೆಗೆ ಬೆಲೆ ಇರಲಿಲ್ಲವೆಂದು ಗೀತೆಯ ಶ್ಲೋಕಗಳಿಂದ ತಿಳಿಯುತ್ತದೆ. ಇಂದೂ ಮತದಲ್ಲಿ ಭಗವದ್ಗೀತೆಯ ಪ್ರಕಾರ ನೋಡಿದರೆ **"ಗುಣಮಯಿ ಮಮ ಮಾಯಾ, ತ್ರೈಗುಣ್ಯ ವಿಷಯಾ ವೇದಾ"** ಎನ್ನುವುದು ನೋಡಿದರೆ ಮಾಯೆ ಗುಣಗಳ ರೂಪದಲ್ಲಿದೆ ಎಂದು, ಗುಣ ವಿಷಯಗಳೇ ವೇದಗಳೆಂದು ತಿಳಿಯುತ್ತದೆ. ಇದರ ಪ್ರಕಾರ **ಮಾಯೆ** = **ಗುಣಗಳು** = **ವೇದಗಳು** ಎಂದು ಅರ್ಥವಾಗುತ್ತದೆ. ಮಾಯೆ ತಲೆಯಲ್ಲಿ ಗುಣಗಳ ರೂಪದಲ್ಲಿದ್ದು ಹೊರಗಡೆ ವೇದಗಳ ರೂಪದಲ್ಲಿದೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಇದರ ಪ್ರಕಾರ ಮಾಯೆ ಎಂದರೂ ವೇದಗಳೆಂದರೂ ಒಂದೇ ಎಂದು, ವೇದಗಳಲ್ಲಿ ಮಾಯೆ ಅಲ್ಲದೆ ದೇವರು ಇಲ್ಲವೆಂದು ತಿಳಿಯುತ್ತದೆ. ಸಂಸ್ಕೃತ ಭಾಷೆ ಕಲಿತ ಪಂಡಿತರು, ಪೂರ್ವಕಾಲದಲ್ಲಿ ಋಷಿಗಳು ಮೊದ ಲಾದವರು ವೇದಗಳನ್ನು ದೊಡ್ಡದಾಗಿ ಹೇಳುತ್ತಿರುವಾಗ, ಪ್ರತಿ ಶುಭಕಾರ್ಯ ದಲ್ಲಿಯೂ ವೇದಮಂತ್ರ ಪಠನೆ ನಡೆಸುತ್ತಿರುವಾಗ, ಈಗ ವಿದೇಶಗಳಲ್ಲಿಯೂ ಸಹ ವೇದಗಳು ಪೂಜಿಸಲ್ಪಡುತ್ತಿರುವಾಗ, ಹಿಂದೂ ಸಂಸ್ಕೃತಿ ಎಲ್ಲ ವೇದಗಳಿಂದ ಕೂಡಿಕೊಂಡಿದೆ ಎಂದು ದೊಡ್ಡವರೆಲ್ಲರು ಹೇಳುತ್ತಿರುವಾಗ, ಅಂದು ಇಂದು ಆಧ್ಯಾತ್ಮಿಕ ಪೀಠಗಳನ್ನು ಅದಿಷ್ಠಿಸಿದ ಶಂಕರಾಚಾರ್ಯರು, ರಾಮಾನುಜಾ ಚಾರ್ಯರು ಮೊದಲಾದ ಆಚಾರ್ಯರೆಲ್ಲರು ವೇದಗಳನ್ನು ಪಠಿಸುತ್ತಾ ಎಲ್ಲರಿಂದ ಪಠಿಸುವಂತೆ ಮಾಡುತ್ತಿರುವಾಗ, ಹಿಂದೂಮತಕ್ಕೆ ಮಾಣಿಕ್ಯದಂತಹವು ವೇದಗಳೆಂದು ಏಕ ಕಂಠದಿಂದ ಪಂಡಿತರೆಲ್ಲರೂ ಹೇಳುತ್ತಿರುವಾಗ, ಆಸ್ತಿಕರೆಲ್ಲರೂ ವೇದಗಳನ್ನೇ ಅನುಸರಿಸುತ್ತಿರುವಾಗ, ಪುರಾಣ ಇತಿಹಾಸಗಳಲ್ಲಿ ವೇದಗಳು ಗೌರವ ಸ್ಥಾನದಲ್ಲಿರುವಾಗ, ಚತುರ್ಮುಖ ಬ್ರಹ್ಮ ವೇದಗಳನ್ನು ರಚಿಸಿದ್ದಾನೆಂದು ಪ್ರಚಾರ ಇರುವಾಗ, ಬಹಳ ಜನ ಹಿಂದೂಗಳ ಹೃದಯಗಳಲ್ಲಿ ದೊಡ್ಡ ಸ್ಥಾನವನ್ನು

ಏರ್ಪಡಿಸಿಕೊಂಡ ವೇದಗಳನ್ನು ನೀವು ಮಾಯೆ ಎನ್ನುತ್ತಿದ್ದೀರೇನು ಎಂದು ಬಹಳ ಜನ ನಮ್ಮನ್ನು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ವೇದಗಳು ದೊಡ್ಡವೆಂದು ಮನುಷ್ಯರು ಎನ್ನುತ್ತಿದ್ದಾರೆ. ದೇವರು ಅವುಗಳನ್ನು ಮಾಯೆ ಎನ್ನುತ್ತಿದ್ದಾನೆ ಎಂದು ನಾನು ಹೇಳಿದ್ದೇನಾಗಲಿ ನಾನು ಸ್ವತಃ ಹೇಳಿರುವುದಲ್ಲ. ಎಲ್ಲರಲ್ಲಿಯೂ ದೊಡ್ಡ ಸ್ಥಾನವನ್ನು ವೇದಗಳು ಸಂಪಾದಿಸಿ ಕೊಂಡಿವೆ. ಆದ್ದರಿಂದ ಎಲ್ಲರಿಗೂ ದೇವರು ತಿಳಿದಿಲ್ಲ. ಭಗವಂತನೇ ಸ್ವತಃ ಗೀತೆಯಲ್ಲಿ ವೇದಗಳು ಮಾಯೆ ಎಂದಿದ್ದಾನೆ. ಅಷ್ಟೇ ಅಲ್ಲದೆ ವಿಶ್ವರೂಪ ಸಂದರ್ಶನ ಯೋಗದಲ್ಲಿ 48ನೇ ಶ್ಲೋಕದಲ್ಲಿಯು 53ನೇ ಶ್ಲೋಕದಲ್ಲಿಯೂ ವೇದಗಳಿಂದ ನಾನು ತಿಳಿಯುವುದಿಲ್ಲ, ಅವುಗಳಿಂದ ನನ್ನನ್ನು ತಿಳಿದುಕೊಳ್ಳುವುದಕ್ಕೆ ಶಕ್ಯವಿಲ್ಲ ಎಂದಿದ್ದಾನೆ. ಋಷಿಗಳು ಹೇಳಿದ್ದಾರೆ ಸಂಸ್ಕೃತ ಪಂಡಿತರು ಹೇಳಿದ್ದಾರೆ, ಪೀಠಾಧಿಪತಿಗಳು ಹೇಳಿದ್ದಾರೆ ಎನ್ನುವುದು ಮುಖ್ಯವಲ್ಲ. ದೇವರು ಹೇಳಿರುವುದು ಮುಖ್ಯ. ಮನುಷ್ಯನಲ್ಲಿನ ಮಾಯೆ ಹೊರಗಡೆ ವೇದಗಳಂತೆ ಇದೆಯೆಂದು, ಅದು ಎಲ್ಲರನ್ನು ಏಮಾರಿಸಿದೆ ಎಂದು, **"ಮಾಯಾ ದುರತ್ಯಯಾ"** ಮಾಯೆಯನ್ನು ತಿಳಿದುಕೊಳ್ಳುವುದು ದುಸ್ಸಾಧ್ಯವೆಂದು ಆದ್ದರಿಂದಲೆ ಎಲ್ಲರೂ ನನ್ನನ್ನು ನಂಬದೆ ಅದನ್ನೇ ನಂಬುತ್ತಿದ್ದಾರೆಂದು ದೇವರೆನ್ನುತ್ತಿದ್ದಾನೆ. ಯಾರಾದರೂ ಕುರುಡರಂತೆ ವಾದಿಸದೆ ಸತ್ಯವನ್ನು ತಿಳಿದುಕೊಳ್ಳಬೇಕೆಂದರೆ ದೇವರು ಹೇಳಿದ ಮಾತನ್ನು ಕೇಳಬೇಕಾಗಿದೆ.

ಮಾಯೆಗೆ ದೂರವಾಗಿ ದೇವರಿಗೆ ಹತ್ತಿರವಾಗಿ ಇರಬೇಕೆಂದರೆ ಮಾಯೆ ಕೆಲಸಗಳನ್ನು ಬಿಟ್ಟು ದೇವರ ಕೆಲಸಗಳನ್ನು ಮಾಡಬೇಕು. ದೇವರ ಕೆಲಸಗಳನ್ನು ಮಾಡಬೇಕೆಂದರೆ ಮಾಯೆ ಕೆಲಸಗಳು ಯಾವುವೋ ವಿವರಿಸಿ ನೋಡಿಕೊಳ್ಳಬೇಕು. ಹಾಗೆ ವಿವರಿಸಿ ನೋಡಿಕೊಂಡರೆ ದೇವರ ಜ್ಞಾನವಾದ ಮದುವೆ ಕಾರ್ಯ ಗಳಲ್ಲಿಯೇ ಜ್ಞಾನವನ್ನು ಮುಚ್ಚಿ ಹಾಕುವಂತೆ ಮಾಯೆ ವೇದಮಂತ್ರ ಪಠನೆರೂಪದಲ್ಲಿದೆ. ದೈವಜ್ಞಾನ ರೂಪವಾದ ಮದುವೆಯಲ್ಲಿ ಮಾಯೆರೂಪವಾದ ವೇದಮಂತ್ರಗಳು ಇರಬಹುದಾ ಎಂದು ಯೋಚಿಸದೆ ತಪ್ಪುವುದಿಲ್ಲ. ಹಾಗೆ

ಯೋಚಿಸಿದರೆ ಮದುವೆಯಲ್ಲಿ ದೈವ ಜ್ಞಾನ ಸಂಬಂಧ ಮಂತ್ರಗಳು ಇರಬಹುದು. ಆದರೆ ಮಾಯೆ ಮಹಿಮೆ ಇರುವ ವೇದಮಂತ್ರಗಳು ಇರಬಾರದೆಂದು ತಿಳಿಯುತ್ತದೆ. ಪೂರ್ವಕಾಲದ ಮದುವೆಯಲ್ಲಿ ಮದುವೆಯ ಬೆಲೆ ತಿಳಿದ ಜ್ಞಾನಿಗಳು ದೈವಸಂಬಂಧ ಮಂತ್ರಗಳನ್ನೇ ಓದುತ್ತಿದ್ದರು. ವೇದ ಸಂಬಂಧ ಮಂತ್ರಗಳನ್ನು ಪಠಿಸುತ್ತಿರಲಿಲ್ಲ. ಕಾಲ ಕ್ರಮೇಣವಾಗಿ ಧರ್ಮಗಳಿಗೆ ಗ್ಲಾನಿ ಏರ್ಪಟ್ಟು ದೈವ ಮಂತ್ರಗಳ ಸ್ಥಾನದಲ್ಲಿ ಮಾಯ ಮಂತ್ರಗಳು ಬಂದು ಸೇರಿಕೊಂಡಿವೆ. ಈಗಿನ ಕಾಲದಲ್ಲಿ ಯಾವ ಮದುವೆಯಲ್ಲಾದರೂ ವೇದ ಮಂತ್ರಗಳೇ ಇವೆ. ಆದರೂ ಈಗಿನ ಕಾಲದಲ್ಲಿಯೂ ಸಹ ನಮ್ಮ ಸಮಕ್ಷಮದಲ್ಲಿ ನಡೆಯುವ ಮದುವೆಗಳಲ್ಲಿ ವೇದಮಂತ್ರಗಳು ಇರುವುದಿಲ್ಲ. ನಾವು ಮಾಡಿಸುವ ಮದುವೆ ಕಾರ್ಯವೂ ಇಂದೂ ಸಾಂಪ್ರದಾಯ ಬದ್ಧವಾಗಿ, ದೈವ ಸಂಬಂಧ ಮಂತ್ರಗಳಿಂದ, ಅರ್ಥದಿಂದ ಕೂಡಿಕೊಂಡ ಆಚರಣೆಗಳಿಂದ ಕೂಡಿಕೊಂಡಂತೆ ರೂಪಿಸಿದ್ದೇವೆ. ಇಂದೂ ಮದುವೆ ಜ್ಞಾನ ಸಂಬಂಧವಾಗಿ ಹೀಗಿರುತ್ತದೆಂದು ತಿಳಿಯುವಂತೆ ದೈವ ಜ್ಞಾನ ಸಂಬಂಧ ಮಂತ್ರಗಳೇ ಪಠಿಸುವಂತೆ ಏರ್ಪಾಟು ಮಾಡಿದ್ದೇವೆ.

ಈಗಲಾದರೂ ಕಣ್ಣುತೆರದು ನಾವು ಹೇಳುವುದು ದೈವ ಪಕ್ಷವೆಂದು ಮಾಯೆ ಪಕ್ಷದವರು ಮಾಯೆಯನ್ನು ಸಹ ಸೃಷ್ಟಿಸಿದ ದೇವರಿಗೇ ಬೆಲೆ ಕೊಡುವಂತೆ ಮದುವೆಯಲ್ಲಿ ವೇದ ಮಂತ್ರಗಳನ್ನು ಬಿಟ್ಟು ದೈವ ಮಂತ್ರಗಳನ್ನು ಪಠಿಸುವುದು ಆಚರಿಸಬೇಕೆಂದು ತಿಳಿಸುತ್ತಿದ್ದೇವೆ. ಹಾಗೆ ಮಾಡುವುದರಿಂದ ಇಂದೂ ಸಾಂಪ್ರದಾಯ ಪರಿರಕ್ಷಣೆಯಲ್ಲಿ ನಾವು ಭಾಗಸ್ಥರಾಗುತ್ತೇವೆ. ಹುಟ್ಟಿದಾಗಿನಿಂದ ಇರುವ ಮಾಯೆ ಮಾರ್ಗವನ್ನು ಬಿಟ್ಟು ಈದಿನ ತಿಳಿದ ದೈವ ಮಾರ್ಗವನ್ನು ಅನುಸರಿಸೋಣ.



# ಶ್ರೀಮತಿ-ಶ್ರೀಮತ

ಇಂದೂ ಸಾಂಪ್ರದಾಯಗಳಲ್ಲಿ ಮದುವೆ ಕಾರ್ಯ ದೊಡ್ಡ ಆಧ್ಯಾತ್ಮಿಕ ಸಂದೇಶದಿಂದ ತುಂಬಿಕೊಂಡಿರುವುದಾಗಿ ಪರಮಾತ್ಮನ ಹತ್ತಿರಕ್ಕೆ ಸೇರಿಸುವುದಾಗಿ ಇದೆ. ಮದುವೆ ಕಾರ್ಯದಲ್ಲಿ ತಲಂಬರಗಳ ಅರ್ಥದ ಪ್ರಕಾರ ನಡೆದುಕೊಂಡಾಗ ನಿಜವಾದ ಸತಿ ಪತಿಯಂತೆ ಲೆಕ್ಕಿಸಬಹುದು. ತಲಂಬರಗಳ ಪ್ರಕಾರ ನಡೆದುಕೊಳ್ಳುವ ಪತಿಯ ಹೆಸರಿಗೆ ಮೊದಲು ಶ್ರೀ ಎಂದೂ, ಸತಿಯ ಹೆಸರಿಗೆ ಮೊದಲು ಶ್ರೀಮತಿ ಎಂದೂ  ಬರೆಯುವುದು ಇಂದೂ ಧರ್ಮ ಸಾಂಪ್ರದಾಯ. ಜ್ಞಾನ ಸಂಪನ್ನರಾದ ಸತಿ ಪತಿಗಳು ಪವಿತ್ರವಾದ ಜ್ಞಾನಕ್ಕೆ ಪರಮಾತ್ಮನಿಗೆ ಚಿಹ್ನೆಗಳೆಂದು ಸಹ ತಿಳಿದು ಬರುತ್ತದೆ. **ಶ್ರೀ ಎಂಬ ಶಬ್ದವು ಪರಮಾತ್ಮನಿಗೆ ಸೂಚನೆಯಾಗಿದ್ದು, ಶ್ರೀಮತಿ ಎಂಬ ಶಬ್ದವು ಪರಮಾತ್ಮನ ಜ್ಞಾನಕ್ಕೆ ಚಿಹ್ನೆ ಎಂದು ತಿಳಿಯಬೇಕು**. ವರಸೆ ಕ್ರಮದಲ್ಲಿ ಸತಿ ಪತಿಗಳೆಂದು ಕರೆಯುವುದರಿಂದ ಮೊದಲು ಪರಮಾತ್ಮ ಜ್ಞಾನದ ಮೂಲಕವೇ ನಂತರ ಪರಮಾತ್ಮನನ್ನು ಸೇರಬಹುದೆಂದು ತಿಳಿದುಬರುತ್ತದೆ.  ಜ್ಞಾನ ಶಬ್ದರೂಪವಾದುದು ಆದ್ದರಿಂದ ಶಬ್ದವನ್ನು ಪ್ರಕೃತಿ ಎಂದೇ ಹೇಳಬಹುದು. ಶಬ್ದವು ಪ್ರಕೃತಿ ಯಾಗಿರುವುದರಿಂದ ಜ್ಞಾನವನ್ನು ಪ್ರಕೃತಿಗೆ ಗುರುತಾದ ಸ್ತ್ರೀಗೆ ಹೋಲಿಸಿ, ಸತಿಯನ್ನು ದೈವಜ್ಞಾನದ  ಅರ್ಥಕೊಡುವ ಶ್ರೀಮತಿ ಎಂದು ದೊಡ್ಡವರು ಹೇಳಿದ್ದಾರೆ. ಮದುವೆಯಾದ ಸ್ತ್ರೀಯನ್ನು ಈಗಲೂ ಶ್ರೀಮತಿ ಎನ್ನುವುದು ಆಚರಣೆಯಲ್ಲಿ ಇದೆ. ಪರಮಾತ್ಮ ಜ್ಞಾನ ಇರುವ ಸ್ತ್ರೀಯನ್ನು ಮಾತ್ರ ಶ್ರೀಮತಿ ಎಂದು ಪೂರ್ವಕಾಲದಲ್ಲಿ ಹೇಳಿರುವಾಗ ಈ ಕಾಲದಲ್ಲಿ ಸ್ವಲ್ಪವೂ ಸಹ ಜ್ಞಾನವಿಲ್ಲದ ಸ್ತ್ರೀಯನ್ನು ಶ್ರೀಮತಿ ಎನ್ನುತ್ತಿದ್ದಾರೆ. ಇಂದೂ ಧರ್ಮದ ಪ್ರಕಾರ ದೇವರ ಜ್ಞಾನವಿಲ್ಲದ ಪತ್ನಿಯರು ಹೆಂಗಸರೇ ಆಗಲಿ ಶ್ರೀಮತಿಯರು ಅಲ್ಲ. ಹಾಗೆಯೇ ಬ್ರಹ್ಮ ಜ್ಞಾನ ತಿಳಿಯದ ಪತಿ ಕೇವಲ ಗಂಡಸೇ ಆಗಲಿ ಶ್ರೀ ಶಬ್ದವು ಆತನಿಗೆ ಅನ್ವಯಿಸುವುದಿಲ್ಲ. ಒಟ್ಟಿನಲ್ಲಿ ಸತಿ ಪತಿಯರು ಪ್ರಕೃತಿ ಪುರುಷರು ಅಲ್ಲ ಆದರೆ ಅವರ ಗುರುತಿಗಾಗಿ ಇರುವವರೆಂದು ತಿಳಿಯಬೇಕು.

ಮತಿ ಎಂದರೆ ಬುದ್ಧಿ ಅಥವಾ ಜ್ಞಾನವೆಂದು ಅನ್ನಬಹುದು. ಶ್ರೀಮತಿ ಎಂದರೆ ದೈವ ಜ್ಞಾನ ಇರುವವರೆಂದು ಅರ್ಥ. ಭಗವದ್ಗೀತೆ ಆತ್ಮ ಸಂಯಮ ಯೋಗದಲ್ಲಿ ದೈವಮಾರ್ಗದಲ್ಲಿ ಯೋಗವನ್ನಾಚರಿಸುವವರು ಮರಣ ಹೊಂದಿದರೆ ನಂತರ ಜನ್ಮ ಹೇಗಿರುತ್ತದೆಂದು ಅರ್ಜುನನು ಕೇಳಿದಾಗ ಶ್ರೀಮತಿ ಯರ ಮನೆಗಳಲ್ಲಿ ಹುಟ್ಟುತ್ತಾರೆಂದು **"ಶ್ರೀಮತಾಂಗೇಹೇ ಯೋಗ ಭ್ರಷ್ಟೋಭಿಜಾಯತೇ"** ಎಂದು ಶ್ರೀ ಕೃಷ್ಣನು ಹೇಳಿದ್ದಾನೆ. ಶುಭಕರವಾದ ದೈವಜ್ಞಾನ ಇರುವವರ ಮನೆಯಲ್ಲಿ ಹುಟ್ಟುತ್ತಾರೆಂದು ಹೇಳುವುದರಲ್ಲಿ ವಿಶೇಷತೆ ಇದೆ. ಈ ವಿಷಯವಾಗಿ ಪೂರ್ವದಿಂದ ಇಲ್ಲಿಯವರೆಗೂ ಒಂದು ಆಚರಣೆ ಇದೆ. ಪೂರ್ವದ ಸಂಪ್ರದಾಯ ಪ್ರಕಾರ ತಲಂಬರಗಳ ಅರ್ಥ ತಿಳಿದು ಸತಿ ಪತಿಗಳು ಒಬ್ಬರ ಮೂಲಕ ಒಬ್ಬರು ಜ್ಞಾನವನ್ನು ಹೊಂದಿರುತ್ತಿದ್ದರು. ಅಂತಹವರಿಗೆ ಸಂತಾನಪ್ರಾಪ್ತಿ ಉಂಟಾಗಿ ಗರ್ಭ ನಿಂತಾಗ ಏಳನೆಯ ತಿಂಗಳಿನಿಂದ ಒಂಭತ್ತನೇ ತಿಂಗಳಿನವರೆಗೂ ಇರುವ ಮಧ್ಯಕಾಲದಲ್ಲಿ ಶ್ರೀಮತ ಎನ್ನುವ ಹೆಸರಿನಿಂದ ಒಂದು ಕಾರ್ಯವನ್ನು ಮಾಡುತ್ತಿದ್ದರು. ಕೆಲವು ಮುತ್ತೈದೆಯರ ಸಮಕ್ಷಮದಲ್ಲಿ ಮಾಡುವ ಈ ಕಾರ್ಯಕ್ಕೆ **ಪೂರ್ವದಲ್ಲಿ ಶ್ರೀಮತವೆಂಬ ಹೆಸರಿದ್ದರೂ, ಕಾಲಗರ್ಭದಲ್ಲಿ ರೂಪಾಂತರಹೊಂದಿ ಇಂದಿಗೆ ಶ್ರೀಮಂತವೆಂಬ ಹೆಸರಾಗಿ ಬದಲಾಗಿದೆ**. ಗರ್ಭಧರಿಸಿರುವಾಗಲೆ ಶ್ರೀಮಂತ ಮಾಡುವುದರಲ್ಲಿ ಅರ್ಥವೇನೆಂದರೆ! ಗರ್ಭಧರಿಸಿದ ಸ್ತ್ರೀಯನ್ನು ನೀನು ಶ್ರೀಮತಿಯು, ನೀನು ದೈವಜ್ಞಾನ ಇರುವವಳು, ನಿನ್ನ ಗರ್ಭದಿಂದ ಹುಟ್ಟುವ ಮಗು ಸಹ ಜ್ಞಾನವಂತನಾಗಬೇಕೆಂದು ಮುತ್ತೈದೆಯರು ಆಶೀರ್ವದಿಸುವುದು ನಡೆಯುತ್ತಿತ್ತು. ಹಿಂದಿನ ಜನ್ಮದಲ್ಲಿ ಪ್ರಯತ್ನ ಮಾಡುತ್ತಾ ಮೋಕ್ಷ ಹೊಂದದೆಯೇ ಮರಣಿಸಿದ ಯೋಗಿ ನಿನ್ನ ಗರ್ಭದಲ್ಲಿ ಗೀತೆಯಲ್ಲಿ ದೇವರು ಹೇಳಿರುವಂತೆ ಜನ್ಮಿಸುತ್ತಾನೆಂದು ತಿಳಿಸುತ್ತಾ ನಡೆಸುವ ಕಾರ್ಯವನ್ನು ಶ್ರೀಮತವೆಂದು ಕರೆಯುತ್ತಿದ್ದರು. ಹಿಂದೆ ದೈವಜ್ಞಾನ ತಿಳಿದಿರುವ ಸ್ತ್ರೀಯರಿಗೆ ಮಾತ್ರವೇ ಈ ಕಾರ್ಯಕ್ರಮವನ್ನು ನಿರ್ವಹಿಸುತ್ತಿದ್ದರು. ಅಜ್ಞಾನಿ ಗಳಾದವರಿಗೆ ಮಾಡುತ್ತಿರಲಿಲ್ಲ. ಇಂದಿನ ಕಾಲದಲ್ಲಿ ಇವರಿಗೆ ಮಾಡಬೇಕೆಂಬ ನಿಯಮವಿಲ್ಲದೆ ಮಾಡುವುದು ನಡೆಯುತ್ತಿದೆ. ಆಚಾರವಿದ್ದು ಅರ್ಥವಿಲ್ಲದೆ

ಹೋಗುವುದರಿಂದ ಆ ಕಾರ್ಯದಲ್ಲಿ ಜ್ಞಾನ ಸಂದೇಶವು ಯಾರಿಗೂ ತಿಳಿಯದಂತೆ ಹೋಗಿದೆ. ಒಂದು ಕಾಯಿ ಕಾಯಬೇಕೆಂದರೆ ಒಂದು ಪುಷ್ಪ ವಿರಬೇಕು. ಪುಷ್ಪವಿದ್ದಾಗಲೇ ಕಾಯಿ ತಯಾರಾಗಬಲ್ಲದು. ಒಬ್ಬ ಬಾಲಕಿ ದೊಡ್ಡವಳಾಗಿ ಮತ್ತೊಂದು ಮಗುವಿಗೆ ಜನ್ಮ ಕೊಡುವ ಸ್ಥಿತಿಗೆ ಬರುವುದನ್ನು ಪುಷ್ಪವತಿಯಾಗಿದ್ದಾಳೆ ಎನ್ನುತ್ತೇವೆ. ಪುಷ್ಪವತಿಯಾಗಿದ್ದಾಳೆ ಎಂದರೆ ಸೃಷ್ಟಿಗೆ ಅನುವಾಗುವ ಸ್ಥಿತಿಗೆ ಬಂದಿದ್ದಾಳೆಂಬ ಮಾತು. ಅಂದರೆ ಪ್ರಕೃತಿಗೆ ಸಮಾನವೆಂಬ ಮಾತು. ಪುರುಷ ಬೀಜದಿಂದ ಪ್ರಕೃತಿ ಸ್ವರೂಪವಾದ ಸ್ತ್ರೀ ಮತ್ತೊಬ್ಬರಿಗೆ (ಜಗತಿಗೆ) ಜನ್ಮಕೊಡುವವಳಾಗಿ ಇದ್ದಾಳೆ. ಪರಮಾತ್ಮ ಪ್ರಕೃತಿ ಸಮಾನರೇ ಸ್ತ್ರೀ ಪುರುಷರೆಂದು ತಿಳಿಯಬೇಕು. ಒಬ್ಬ ಬಾಲಕಿಗೆ ಯುಕ್ತವಯಸ್ಸು ಬಂದು ಮೊದಲನೆಯ ಋತುಸ್ರಾವದಿಂದ ಪ್ರಕೃತಿ ಸ್ವರೂಪಿಣಿಯಾಗಿ ಬದಲಾಗುತ್ತಾಳೆ. ಆದ್ದರಿಂದ ಪ್ರಕೃತಿ ಸೃಷ್ಟಿಗೆ ಆಧಾರವಾಗಿದೆ ಎಂದು ಎಲ್ಲರೂ ತಿಳಿಯುವಂತೆ ಪುಷ್ಪವತಿಯಾಗಿ ಬದಲಾದ ಸ್ತ್ರೀಗೆ **"ಋತುಮತಿ"** ಹೆಸರಿನಿಂದ ಕಾರ್ಯ ಮಾಡುವುದು ಸಹ ಇಂದೂ ಸಾಂಪ್ರದಾಯದಲ್ಲಿ ಇದೆ. ಸೃಷ್ಟಿ ಸ್ವರೂಪಿಣಿ ಪ್ರಕೃತಿಯೆಂದು ತಿಳಿಸುವ ಕಾರ್ಯವೇ ಪುಷ್ಪವತಿ. ಪುಷ್ಪವತಿ ಕಾರ್ಯ ಸ್ತ್ರೀಯರಿಗೆಲ್ಲ ಮಾಡಬಹುದು, ಹಾಗೆಯೇ ಮದುವೆಯೂ ಸಹ ಸ್ತ್ರೀಯರಿಗೆಲ್ಲ ಮಾಡಬಹುದು, ಆದರೆ ಶ್ರೀಮತ (ಶ್ರೀಮಂತವು) ಎಲ್ಲರಿಗೂ ಮಾಡಬಾರದು. ಋತಿಮತಿ, ಮದುವೆ, ಶ್ರೀಮಂತ ಕ್ರಮವಾಗಿ ಸ್ತ್ರೀ ಜೀವನದಲ್ಲಿ ನಡೆಯುವ ವಾದರೂ ಅವುಗಳಲ್ಲಿ ಎಷ್ಟೋ ಜ್ಞಾನವನ್ನು ತುಂಬಿ ಹಿರಿಯರು ಸಾಂಪ್ರದಾಯ ರೂಪಗಳಲ್ಲಿ ನಮ್ಮ ಸಮಾಜದಲ್ಲಿ ಇಟ್ಟಿದ್ದಾರೆ.

ಪುಷ್ಪವತಿಯಾದ ಸ್ತ್ರೀ ಮದುವೆಯಿಂದ ಶ್ರೀಮತಿಯಾಗಿ ಬದಲಾಗಬೇಕಾಗಿದೆ. ನಿಶ್ಚಿತಾರ್ಥ ಮದುವೆಯಾದರೂ ಜ್ಞಾನ ತಿಳಿಯದವರು ಸತಿಪತಿಯರ ಲೆಕ್ಕದೊಳಗಿನವರಲ್ಲವೆಂದು, ಪ್ರಕೃತಿ ಪುರುಷರ ಚಿಹ್ನೆಗಳಲ್ಲವೆಂದು ತಿಳಿಯಬೇಕು. ಅವರದು ಅಕ್ರಮ ಸಂಬಂಧವಾಗುವುದೆಂದು ತಿಳಿಯಬೇಕು. ಮದುವೆಯ ದಿನ ಮಾಡಿ ತೋರಿಸಿದ ಕಾರ್ಯಗಳಿಗೆ ಬೆಲೆ ಕೊಡದವರನ್ನು, ಮದುವೆಯ

ದಿನ ಆಚರಿಸಿದ ಕೆಲಸಗಳನ್ನು ನೆರವೇರಿಸದೆ ಇರುವುದರಿಂದ ಅವರು ಅರ್ಥದ ಪ್ರಕಾರ ಸಾಂಪ್ರದಾಯ ಬದ್ಧರಾದ ಸತಿಪತಿಗಳು ಅಲ್ಲವೆಂದು ಹೇಳಬಹುದು. ಆದ್ದರಿಂದಲೆ ಅವರದು ಅಕ್ರಮ ಸಂಬಂಧವೆಂದು, ಅಂತಹವರಲ್ಲಿ ಜ್ಞಾನ ಇರುವುದಿಲ್ಲವಾದ್ದರಿಂದ ಅವರಿಗೆ ಉಂಟಾಗುವ ಸಂತತಿ ಸಹ ಅಜ್ಞಾನಿಗಳೆ ಆಗುತ್ತಾರೆಂದು ತಿಳಿಯಬೇಕು. ದೈವಜ್ಞಾನ ಸಂಪನ್ನರ ದೇಶವಾಗಿ ಹೆಸರು ಹೊಂದಿ ಇಂದೂಗಳ (ಜ್ಞಾನಿಗಳ) ದೇಶವೆಂದು ಹೆಸರು ಪಡೆದ ಈ ಭೂಮಿ ಮೇಲೆ, ಜ್ಞಾನಿಗಳೆ ಉದ್ಭವಿಸಬೇಕೆಂದು ಯೋಚಿಸಿದ ಹಿರಿಯರು ಪೂರ್ವದಲ್ಲಿ ಋತಿಮತಿ, ಮದುವೆ, ಶ್ರೀಮಂತವೆಂಬ ಕಾರ್ಯಗಳಲ್ಲಿ ಜ್ಞಾನವನ್ನು ತುಂಬಿ ಆಚರಿಸುವಂತೆ ಮಾಡಿದ್ದಾರೆ. ಆ ಕಾರ್ಯಗಳಲ್ಲಿಯೇ ಜ್ಞಾನ ತಿಳಿಯುವುದರಿಂದ ಸತಿಪತಿಗಳು ಪ್ರಕೃತಿ ಪುರುಷರೊಂದಿಗೆ ಸಮಾನ ಚಿಹ್ನೆಗಳಾಗಿ ಅವರಿಗೆ ಉಂಟಾಗುವ ಸಂತತಿ ಜ್ಞಾನ ಸಂತತಿಯಾಗಬೇಕೆಂದು ಹಿರಿಯರ ಉದ್ದೇಶ.

ಆಚಾರಗಳಿದ್ದು ಅರ್ಥಗಳು ಇಲ್ಲದಂತೆ ಹೋಗಿರುವ ಈ ಸಮಾಜವನ್ನು ಪುನಃ ಅರ್ಥವಂತವಾಗಿ ಮಾಡಬೇಕೆಂದರೆ ಆಚಾರಗಳಲ್ಲಿ ಅರ್ಥಗಳು ತುಂಬಿದ ಭಾವದಿಂದ ಮಾಡಬೇಕು. ತಿಳಿಯದವರಿಗೆ ಕೆಲಸಗಳಲ್ಲಿನ ಭಾವವನ್ನು ತಿಳಿಸಿ ನಾವೂ ಸಹ ಹಿರಿಯರ ಭಾವನೆಗಳ ಪ್ರಕಾರವೇ ಆಚರಿಸಿದಾಗ ಇಂದೂ ಧರ್ಮಗಳು ಪುನಃ ಸಜೀವವಾಗುತ್ತವೆ. ಪ್ರಪಂಚಕ್ಕೆಲ್ಲ ಅಧಿಪತಿಯಾದ ದೇವರನ್ನು ತಿಳಿದುಕೊಳ್ಳಲು ಮಾರ್ಗ ಏರ್ಪಡಬಹುದು.



# ಮುಂಡೆ ಮೋಸುವುದು (ಮುಂಡೆಮುಚ್ಚುವುದು)

ಮದುವೆ ಆಗಿ ಸ್ವಲ್ಪ ಕಾಲ ಗಂಡನ ಜೊತೆ ಸಂಸಾರ ಮಾಡಿದ ನಂತರ ಗಂಡ ಮರಣಿಸಿದಾಗ, ಅಲ್ಲಿಯವರೆಗೂ ಹೆಂಡತಿಯಾಗಿದ್ದ ಸ್ತ್ರೀ, ಹೆಂಡತಿ ಎಂಬ ಹೆಸರು ಕಳೆದುಕೊಂಡು ವಿಧವೆಯಾಗಿ ಇರುವುದು ನಡೆಯುತ್ತದೆ. ಪೂರ್ವದಲ್ಲಿ ನಾವು ಇಂದೂಗಳಾಗಿ ಇದ್ದಾಗ ಹೆಂಡತಿಯಿಂದ ಮುಂಡೆಮೋಪಿ

ಯಾಗಿ ಬದಲಾಗುವುದು ಸಹ ಸಂಪ್ರದಾಯವಾಗಿ ಇರುತ್ತಿತ್ತು. ಈ ದಿನ ಇಂದೂಮತ ಹಿಂದೂಮತವಾಗಿ ಬದಲಾಗಿ ಅಂದಿನ ಸಂಪ್ರದಾಯ ಗಳಲ್ಲಿನ ಅರ್ಥ ತಿಳಿಯದಂತೆ ಹೋಗಿದೆ. ಮುಂಡೆಮೋಪಿಯಾಗಿ ಬದಲಾಗುವು ದೆಂಬ ಆಚರಣೆ ಇಂದಿಗೂ ಇದ್ದರೂ, ಆದಿನದ ಅರ್ಥ ಈದಿನ ಇಲ್ಲ. ಆದಿನದ ಅರ್ಥ ಈದಿನ ಅಪಾರ್ಥವಾಗಿ ಬದಲಾಗಿ ಹೋಗಿದೆ. ಇಂತಹ ಸಂದರ್ಭದಲ್ಲಿ ಅಂದಿನ ನಮ್ಮ ಇಂದೂ ಸಂಪ್ರದಾಯಗಳಲ್ಲಿ ಮುಂಡೆಮೋಸುವುದು ಎಂದರೆ ಏನೋ ತಿಳಿದುಕೊಳ್ಳೋಣ. ನಮ್ಮ ರಚನೆಯಲ್ಲಿನ “ಬೈಗಳಲ್ಲಿ ಜ್ಞಾನ” ಎಂಬ ಪುಸ್ತಕದಲ್ಲಿ ಮುಂಡೆಮೋಸ ಎಂಬ ಪದವನ್ನು ಕುರಿತು ಸ್ವಲ್ಪ ಹೇಳುವುದು ನಡೆದಿದೆ. ಅಲ್ಲಿ ಮುಂಡೆ ಎಂದರೆ ಚಲಿಸುವ ಮನಸ್ಸು ಎಂದು ಪ್ರಸ್ತಾಪಿಸಿರುವು ದಾಗಿದೆ. ವಾಸ್ತವಕ್ಕೆ ”ಮುಂಡೆಮುಚ್ಚೆ” ಎನ್ನುವ ಪದ ನಂತರ ಕಾಲಗಮನದಲ್ಲಿ “ಮುಂಡೆಮೋಸ” ಎನ್ನುವ ಪದವಾಗಿ ಬದಲಾಗಿದೆ ಎಂದೂ ಸಹ ಹೇಳಿ ಕೊಂಡಿದ್ದೇವೆ. ಮುಂಡೆ ಅಂದರೆ ವ್ಯಭಿಚಾರಿ ಎಂದು, ಮುಂಡೆಮಗ ಅಂದರೆ ವ್ಯಭಿಚಾರಿಯ ಮಗನೆಂದು ಅರ್ಥ. ಮುಂಡೆಮುಚ್ಚೆ ಎನ್ನುವ ಪದದಲ್ಲಿ ಮುಚ್ಚೆ ಎಂದರೆ ಮುಚ್ಚೆಹಾಕುವುದು ಅಥವಾ ಇಲ್ಲದಂತೆ ಮಾಡುವುದು ಎಂಬ ಭಾವನೆ. ಮುಂಡೆಮುಚ್ಚೆ ಎಂದರೆ ವ್ಯಭಿಚಾರ ಇಲ್ಲದಂತೆ ಮಾಡುವುದೆಂದು ಅರ್ಥ. ಇಲ್ಲಿ ನಮ್ಮ ಶರೀರದಲ್ಲಿ ಮುಂಡೆಯಂತಿರುವುದು ಮನಸ್ಸು, ಮನಸ್ಸು ವಿಷಯ ವ್ಯಭಿಚಾರಗಳಿರುವುದು, ಆದ್ದರಿಂದ ಅದನ್ನು ಮುಂಡೆಯಾಗಿ ಹೇಳುವುದು ನಡೆದಿದೆ. ಮುಂಡೆಮುಚ್ಚೆ ಅಂದರೆ ವಿಷಯಗಳ ಮೇಲೆ ಚಲಿಸುವ ಮನಸ್ಸನ್ನು ಇಲ್ಲದಂತೆ ಮಾಡುವುದೆಂದು ಅರ್ಥ. “ಮುಂಡೆಮುಚ್ಚೆ” ಎಂಬ ಪದವು ಕಾಲಕ್ರಮವಾಗಿ “ಮುಂಡೆಮೋಸ” ಎನ್ನುವ ಪದವಾಗಿ ಬದಲಾಗಿಹೋಗಿದೆ.

ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಪ್ರಕಾರ ಮನುಷ್ಯ ದೇವರನ್ನು ಸೇರುವುದಕ್ಕೆ ಎರಡು ಮಾರ್ಗಗಳು ಇವೆ. ಒಂದು ಕರ್ಮ ಯೋಗ, ಎರಡು ಬ್ರಹ್ಮಯೋಗ. ಮನಸ್ಸು ತನ್ನ ಕೆಲಸ ತಾನು ಮಾಡುತ್ತಿದ್ದರೂ, ಎಲ್ಲ ವಿಷಯಗ ಳೊಂದಿಗೆ ಸಂಬಂಧವಿದ್ದು ಕೆಲಸ ಮಾಡುತ್ತಾ ಆಚರಿಸುವುದಕ್ಕೆ ಯೋಗ್ಯ

ವಾಗಿರುವುದು ಕರ್ಮಯೋಗ. ಮನಸ್ಸನ್ನು ಯಾವ ಕೆಲಸ ಮಾಡದಂತೆ ಮಾಡಿ, ಒಂದು ವಿಷಯದೊಂದಿಗೆ ಸಹ ಸಂಬಂಧ ಇಲ್ಲದಂತೆ ಆಚರಿಸುವು ದಕ್ಕಾಗುವುದು ಬ್ರಹ್ಮಯೋಗ. ಈ ಎರಡು ಯೋಗಗಳು ದೇವರನ್ನು ಸೇರುವ ಮಾರ್ಗಗಳೆ ಆದರೂ ಪತಿ ಇದ್ದಾಗ ಸ್ತ್ರೀ ಎಲ್ಲ ಸಂಬಂಧಗಳನ್ನು ಹೊಂದಿದ್ದು ಕರ್ಮ ಯೋಗವನ್ನು ಆಚರಿಸಬೇಕೆಂದು, ಪತಿ ಮರಣಿಸಿದ ನಂತರ ಒಂಟಿಯಾದಾಗ ಯಾವ ಸಂಬಂಧ ಇಲ್ಲದಂತೆ ಮನಸ್ಸನ್ನು ನಿಲ್ಲಿಸಿ ಬ್ರಹ್ಮಯೋಗವನ್ನು ಆಚರಿಸಬೇಕೆಂದು ಪೂರ್ವದಲ್ಲಿ ಹಿರಿಯರು ಹೇಳುತ್ತಿದ್ದರು. ಗಂಡಹೋದ ಸ್ತ್ರೀ ಬ್ರಹ್ಮಯೋಗವನ್ನು ಆಚರಿಸಬೇಕೆಂದು, ಹೊರಗಿನ ಸಂಬಂಧಗಳನ್ನು ಬಿಡಬೇಕೆಂದು ತಿಳಿಸುವ ಸಾಂಪ್ರದಾಯವೇ ಮುಂಡೆಮುಚ್ಚಿ (ಮುಂಡೆಮೋಸ) ಎನ್ನುವ ಕಾರ್ಯ. ಮೊದಲ ಮುಂಡೆಮುಚ್ಚಿ ಎನ್ನುವ ಪದ ಸ್ವಲ್ಪ ಕಾಲಕ್ಕೆ ಮುಂಡೆಮೋಸ ಎನ್ನುವ ಪದವಾಗಿ ಬದಲಾಗಿಹೋಗಿದೆ. ನಂತರ ಸ್ವಲ್ಪ ಕಾಲಕ್ಕೆ ಮುಂಡೆಮೋಸ ಎನ್ನುವ ಪದ ಮುಂಡೆಮೋಪಿ ಎಂಬ ಪದವಾಗಿ ಬದಲಾಗಿದೆ. ಪ್ರಸ್ತುತ ಕಾಲದಲ್ಲಿ ಗಂಡ ಇಲ್ಲದ ಸ್ತ್ರೀಯನ್ನು ಮುಂಡೆಮೋಪಿ (ವಿಧವೆ) ಎನ್ನುತ್ತಿದ್ದೇವೆ. ಹೀಗೆ ಪದಗಳು ಬದಲಾಗಿರುವುದರಿಂದ, ಅವುಗಳ ಪೂರ್ವಾ ಪರಗಳು ಹೇಳುವವರು ಇಲ್ಲದಿರುವುದರಿಂದ, ಮುಂಡೆಮೋಸ (ಮುಂಡೆಮುಚ್ಚು) ಕಾರ್ಯವು ಜ್ಞಾನದಿಂದ ಕೂಡಿಕೊಂಡ ಸಂಪ್ರದಾಯವೆಂದು ತಿಳಿಯದಂತೆ ಹೋಗಿದೆ. ಮನುಷ್ಯರಿಗೆ ಅರ್ಥ ತಿಳಿಯದಿದ್ದರು, ಪದಗಳ ರೂಪವು ಕಾಲಗಮನದಲ್ಲಿ ಬದಲಾದರೂ, ಮನುಷ್ಯರ ಮಧ್ಯದಲ್ಲಿ ಆಚರಣೆ ರೂಪಗಳಲ್ಲಿ ಕೆಲವು ಇಂದೂಸಾಂಪ್ರದಾಯಗಳು ಸಜೀವವಾಗಿವೆ. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಮನುಷ್ಯ ದೇವರನ್ನು ಸೇರುವುದಕ್ಕೆ ಸೂಚಿಸಿದ ಎರಡು ಮಾರ್ಗಗಳಾದ ಕರ್ಮಯೋಗ, ಬ್ರಹ್ಮಯೋಗಗಳಲ್ಲಿ ದಾಂಪತ್ಯ ಜೀವನವೆಲ್ಲವೂ ಕರ್ಮಯೋಗಕ್ಕೆ ಸಂಬಂದಿಸಿರುವುದಾಗಿ ಕಳೆಯುವುದಕ್ಕೆ, ದಾಂಪತ್ಯ ಜೀವನದ ನಂತರ ಬ್ರಹ್ಮಯೋಗಕ್ಕೆ ಸಂಬಂಧಿಸಿರುವುದಾಗಿ ಕಳೆಯುವು ದಕ್ಕೆ ಯೋಗ್ಯವಾಗಿದೆ ಎಂದು ಹಿರಿಯರು ತಿಳಿಸಿದ್ದಾರೆ. ಗಂಡ ಸತ್ತ ಹೆಂಡತಿಗಾ

ಗಲಿ, ಹೆಂಡತಿ ಸತ್ತ ಗಂಡನಿಗಾಗಲಿ ಬ್ರಹ್ಮಯೋಗ ಯೋಗ್ಯವೆನ್ನುವಂತೆ ಮುಂಡೆಮೋಸ (ವಿಧವೆ) ಕಾರ್ಯವನ್ನು ಗುರುತಿಗಾಗಿ ಇಟ್ಟಿದ್ದಾರೆ.

ಮುಂಡೆಮುಚ್ಚಿ (ಮುಂಡೆಮೋಸಿ) ದ ನಂತರ ಆತನು ಅಥವಾ ಆಕೆ ಮನಸ್ಸನ್ನು ಜಯಿಸಿದವರೆಂದು ತಿಳಿಯುವಂತೆ ಅವರನ್ನು ಪ್ರತ್ಯೇಕವಾಗಿ ಕಾಣಿಸುವಂತೆ ಮಾಡುತ್ತಾರೆ. ಹಾಗೆ ಕಾಣಿಸುವುದರಿಂದ ಸಾಟಿ ಮನುಷ್ಯರಲ್ಲಿ ಅವರಿಗೆ ಪ್ರತ್ಯೇಕವಾದ ಬೆಲೆ ಇರುತ್ತದೆಂದು, ಅವರಿಂದ ಬ್ರಹ್ಮಯೋಗ ಇರುವಿಕೆ ಮಾನವರಿಗೆ ತಿಳಿಯುತ್ತದೆಂದು ಹಿರಿಯರ ಉದ್ದೇಶ ಇರುತ್ತಿತ್ತು. ಪೂರ್ವವು ಮುಂಡಮೋಸಿದವರನ್ನು ನೋಡಿದರೆ ಶುಭಪ್ರದವಾಗಿ ತಿಳಿಯುತ್ತಿದ್ದರು. ಅವರನ್ನು ಬಾಹ್ಯವಿಷಯಗಳನ್ನು ತ್ಯಜಿಸಿದ ಬ್ರಹ್ಮಯೋಗಿಗಳಂತೆ ಮಾತನಾಡಿಸುತ್ತಿದ್ದರು. ಈಗಿನ ಕಾಲದಲ್ಲಿ ಪೂರ್ವ ಭಾವನೆಗಳು ಸ್ವಲ್ಪವೂ ಇಲ್ಲದಂತೆಹೋಗಿವೆ. ಮುಂಡೆಮೋಸಿದ (ಮುಂಡೆಮುಚ್ಚಿದ) ವರನ್ನು ನೋಡಿದರೆ ಅಪಶಕುನವಾಗಿ, ಅಶುಭವಾಗಿ ತಿಳಿಯುತ್ತಿದ್ದಾರೆ. ಮಂಗಳ ಎಂದರೆ ಶುಭ ಎಂದು ಅರ್ಥ. ಮಂಗಳರು ಎಂದರೆ ಶುಭವಾದವರು ಎಂದು ಅರ್ಥ. ಪೂರ್ವದಲ್ಲಿ ಮಂಗಳ ರನ್ನು (ಕ್ಷೌರಿಕರನ್ನು) ಶುಭಶಕುನವಾಗಿ, ಶುಭಸೂಚನೆಯಾಗಿ ತಿಳಿಯುತ್ತಿದ್ದರು. ಈದಿನ ಮಂಗಳರೂ, ವಿಧವೆಯರೂ ಇಬ್ಬರು ಅಪಶಕುನರಾಗಿ ಅಶುಭರಾಗಿ ಲೆಕ್ಕಿಸಲ್ಪಡುತ್ತಿದ್ದಾರೆ. ಈ ದಿನ ಅಜ್ಞಾನ ಬೆಳೆದುಹೋಗಿರುವುದರಿಂದ, ಆತ್ಮಜ್ಞಾನ ಅಸಲಿಗೆ ತಿಳಿಯದಿರುವುದರಿಂದ, ದೈವ ವಿವರವನ್ನು ತಿಳಿಸುವ ಸಾಂಪ್ರದಾಯಗಳು ಅರ್ಥವಿಲ್ಲದ ಆಚರಣೆಗಳಾಗಿರುವುದರಿಂದ ಮುಂಡೆಮೋಸಿದವರನ್ನು ಪ್ರಜೆಗಳು ಅಶುಭರಾಗಿ ತಿಳಿಯುತ್ತಿದ್ದಾರೆ. ಪೂರ್ವದಲ್ಲಿ ಶುಭಕಾರ್ಯಗಳು ನಡೆಯುವಾಗ ಬ್ರಹ್ಮಯೋಗಿಗಳಂತಿರುವ ಮತ್ತು ಬ್ರಹ್ಮಯೋಗಿಗಳಿಗೆ ಗುರುತಾಗಿರುವ ಮುಂಡೆ ಮೋಸಿದವರ ಹತ್ತಿರ ಆಶೀರ್ವಾದಗಳು ಪಡೆಯುತ್ತಿದ್ದರು. ಮದುವೆ ಮೊದಲಾದ ಶುಭಕಾರ್ಯಗಳಲ್ಲಿ ಮುಂದಿನ ಸಾಲಿನಲ್ಲಿಯೇ ಅವರಿಗೆ ಸ್ಥಾನ ಕಲ್ಪಿಸುತ್ತಿದ್ದರು. ಈದಿನ ಅದೆಲ್ಲವೂ ಬದಲಾಗಿಹೋಗಿದೆ. ಮುಂಡೆಮೋಸಿದ ಹೆಂಗಸರನ್ನು ಶುಭಕಾರ್ಯಗಳಿಗೆ ಬಹಳ ದೂರವಾಗಿ ಇಡುತ್ತಿದ್ದಾರೆ. ಮುಂಡೆ ಮೋಸಿದವರೂ

ಸಹ ಬ್ರಹ್ಮಯೋಗದ ವಿಷಯ ಸ್ವಲ್ಪವೂ ಸಹ ತಿಳಿಯದೆ ಅಜ್ಞಾನಿಗಳಾಗಿ, ವಾಸ್ತವಕ್ಕೆ ಅಶುಭರಾಗಿಹೋಗಿದ್ದಾರೆ.

**ಹೆಂಡತಿ ಸತ್ತ ಗಂಡ, ಗಂಡ ಸತ್ತ ಹೆಂಡತಿ ಇಬ್ಬರು ಮುಂಡೆಮುಚ್ಚಿದ (ಮುಂಡೆಮೋಸಿದ) ವರೆ ಆದರೂ ಪುರುಷನನ್ನು ವೆಧವ ಎಂದು, ಸ್ತ್ರೀಯನ್ನು ವಿಧವ ಎಂದು ಎನ್ನುವುದು ನಡೆಯುತ್ತದೆ.** ಪುರುಷನು ಮುಂಡೆಮೋಸಿದ ನಂತರ ಹೊರಗೆ ಕಾಣಿಸುವಂತೆ ಗುರುತಿಗಾಗಿ ಎಲ್ಲಿ ಇಲ್ಲದಿದ್ದರೂ ಸ್ತ್ರೀ ಮಾತ್ರ ಹೊರಗೆ ಕಾಣಿಸುವಂತೆ, ಈಕೆ ವಿಧವೆ ಎಂದು ಎಲ್ಲರಿಗೂ ತಿಳಿಯುವಂತೆ ಕಾಣಿಸುತ್ತಿದ್ದಾಳೆ. ಗಂಡ ಮರಣಿಸಿದ ನಂತರ ಮೂರು ದಿನಗಳಿಗೊ, ಐದು ದಿನಗಳಿಗೊ, ಹನ್ನೊಂದು ದಿನಗಳಿಗೊ ಮುಂಡೆಮೋಸುವ ಕಾರ್ಯ ಮಾಡುತ್ತಿದ್ದಾರೆ. ಮುಂಡೆಮೋಸಿದ ದಿನದಂದು ಸ್ತ್ರೀಗೆ ಅಲಂಕಾರವಾದಂತಹ, ಸೌಭಾಗ್ಯವಾದಂತ ಹವುಗಳನ್ನು ತೆಗೆದುಹಾಕುತ್ತಿದ್ದಾರೆ. ಸ್ತ್ರೀಗೆ ಅಲಂಕಾರ ವಾದಂತಹ ತಲೆಯಲ್ಲಿನ ಹೂಗಳು, ಹಣೆಯ ಮೇಲಿನ ಬೊಟ್ಟು, ಕೈಬಳೆಗಳನ್ನು ತೆಗೆದು ಹಾಕುತ್ತಿದ್ದಾರೆ. **ಚಿಕ್ಕಂದಿನಿಂದ ಧರಿಸುತ್ತಾ ಬಂದಿರುವ ಅವುಗಳನ್ನು ಅಲಂಕಾರ ವಾದವುಗಳೆಂದು ಹೇಳುತ್ತಿದ್ದೇವೆ. ವಿವಾಹವಾಗಿ ಗಂಡ ಬಂದಾಗಿನಿಂದ ಧರಿಸುತ್ತಾ ಬಂದಿರುವ ತಾಳಿಯನ್ನು, ಕಾಲುಂಗುರಗಳನ್ನು ಸೌಭಾಗ್ಯವಾದವೆಂದು ಎನ್ನುತ್ತಿದ್ದೇವೆ.** ಗಂಡ ಮರಣಿಸಿದ್ದಾನೆಂದು ಸೂಚನೆ ತಿಳಿಯುವಂತೆ ಸೌಭಾಗ್ಯ ವಾದ ತಾಳಿ, ಕಾಲುಂಗುರ ತೆಗೆದುಹಾಕುವುದು ಸಾಂಪ್ರದಾಯ. ಮುಂಡೆಮೋಸಿದ ಸ್ತ್ರೀಗೆ ಅಲಂಕಾರವಾದ ಹೂವು, ಬೊಟ್ಟು, ಬಳೆಗಳು ಇರಬಹುದು. ಆದರೇ ಸೌಭಾಗ್ಯವಾದ ತಾಳಿ, ಕಾಲುಂಗುರಗಳು ಇರಬಾರದು. ಪೂರ್ವಕಾಲದಲ್ಲಿ ಆಚಾರದ ಪ್ರಕಾರ ಇಂದಿಗೂ ಕೆಲವು ಸ್ತ್ರೀಯರು ಗಂಡ ಹೋದ ನಂತರ ತಾಳಿ, ಕಾಲುಂಗುರಗಳು ಇಲ್ಲದಂತೆ ಕಾಣಿಸುತ್ತಿದ್ದಾರೆ.

ಷಟ್ ಶಾಸ್ತ್ರಗಳಲ್ಲಿ ಐದನೇ ಶಾಸ್ತ್ರ ಜ್ಯೋತಿಷ್ಯಶಾಸ್ತ್ರ, ಆರನೇ ಶಾಸ್ತ್ರ ಬ್ರಹ್ಮವಿದ್ಯಾಶಾಸ್ತ್ರ ಎಂದು ತಿಳಿದುಕೊಂಡಿದ್ದೇವೆ. ಜ್ಯೋತಿಷ್ಯಶಾಸ್ತ್ರದ ಪ್ರಕಾರ ಗ್ರಹಗಳು ಎರಡು ಭಾಗಗಳಾಗಿವೆ. ಒಂದು ಗುರುಪಾರ್ಟಿ, ಎರಡು ಶನಿ ಪಾರ್ಟಿ.

ಈ ಎರಡು ಗುಂಪುಗಳಲ್ಲಿಯೂ ಸೌಭಾಗ್ಯ ಜೀವನದ ಮೇಲೆ ಪ್ರಭಾವವನ್ನು ತೋರಿಸುವ ಗ್ರಹಗಳು ಒಂದು ಕುಜಗ್ರಹ, ಎರಡನೆಯದು ಶುಕ್ರಗ್ರಹ. ಈ ಎರಡು ಒಂದಕ್ಕೊಂದು ಶತ್ರುತ್ವ ಹೊಂದಿದ ಗ್ರಹಗಳು. ಕುಜಗ್ರಹ ಯೌವ್ವನಕ್ಕೆ ಸಂಬಂಧಿಸಿರುವುದು, ಶುಕ್ರಗ್ರಹವು ಯೌವನ ಸುಖಕ್ಕೆ ಸಂಬಂಧಿ ಸಿರುವುದು. ವಿಧವೆಯಾದವರು ಯೌವ್ವನಕ್ಕಾಗಲಿ. ಯೌವ್ವನದ ಸುಖಕ್ಕಾಗಲಿ ಸಂಬಂಧಿಸಿ ದವರು ಅಲ್ಲ ಎನ್ನುವಂತೆ ಆ ಗ್ರಹಗಳ ಸ್ವಂತ ಬಣ್ಣಗಳ ಸೀರೆಗಳನ್ನು ಸ್ತ್ರೀಯರು ಧರಿಸುತ್ತಿದ್ದರು. ಜಾತಕ ಪ್ರಕಾರ ಗುರು ಲಗ್ನಗಳಲ್ಲಿ ಹುಟ್ಟಿದವರು ವಿಧವೆ ಆದ ನಂತರ ಕುಜನ ಬಣ್ಣವಾದ ಕೆಂಪನೆಯ ವಸ್ತ್ರಗಳು ಧರಿಸುತ್ತಿದ್ದರು. ಶನಿ ಲಗ್ನಗಳಲ್ಲಿ ಹುಟ್ಟಿದವರು ಶುಕ್ರನ ಬಣ್ಣವಾದ ಬಿಳಿಯ ವಸ್ತ್ರಗಳು ಧರಿಸುತ್ತಿದ್ದರು. ಪೂರ್ವಕಾಲದಲ್ಲಿ ವಿಧವೆಯರೆಲ್ಲ ಕೆಂಪನೆಯ ವಸ್ತ್ರಗಳಲ್ಲಿ ಕೆಲವರು, ಬಿಳಿಯ ವಸ್ತ್ರಗಳಲ್ಲಿ ಕೆಲವರು ಕಾಣಿಸುತ್ತಿದ್ದರು. ಕಾಲ ಕಳೆದಂತೆಲ್ಲಾ ವಾಸ್ತವಗಳು ಮರೆಯಾಗಿ ಹೋಗಿ ಕೆಂಪನೆಯ ಸೀರೆಗಳು ಬ್ರಾಹ್ಮಣ ಸ್ತ್ರೀಯರು, ಬಿಳಿಯ ಸೀರೆಗಳು ಉಳಿದ ಕುಲದ ಸ್ತ್ರೀಯರು ಧರಿಸುವುದು ಪ್ರಾರಂಭಮಾಡಿದ್ದಾರೆ. ಹಾಗೆ ಸ್ವಲ್ಪ ಕಾಲ ಕಳೆದಾಗ ಕೆಂಪು ಸೀರೆ ಕಟ್ಟುವ ಬ್ರಾಹ್ಮಣರು, ಬಿಳಿ ಸೀರೆ ಕಟ್ಟುವ ಶೂದ್ರರು ಕಾಣಿಸದಂತೆ ಹೋಗುತ್ತಿದ್ದಾರೆ. ಈ ವಿಧವಾಗಿ ಕೆಲವು ಸಾಂಪ್ರದಾಯಗಳು ಬದಲಾವಣೆಯಾಗಿ ಕಣ್ಮರೆಯಾಗಿ ಹೋಗುತ್ತಿವೆ. ಇವುಗಳ ವಿವರ ತಿಳಿಸುವ ಹಿರಿಯರು ಇಲ್ಲದಿರುವುದರಿಂದ, ಅರ್ಥ ತಿಳಿಯದ ಆಚರಣೆ ಗಳಾಗಿರುವುದರಿಂದ, ಅವುಗಳನ್ನು ಆಚರಿಸುವುದಕ್ಕೆ ಬಹಳ ಜನರು ಆಸಕ್ತಿ ತೋರಿಸುತ್ತಿಲ್ಲವೆಂದು ತಿಳಿಯುತ್ತಿದೆ. ಇನ್ನೂ ಸ್ವಲ್ಪ ಕಾಲಕ್ಕೆ ಮುಂಡೆ ಮೋಸಿದವರು ಸೀರೆಗಳ ವಿಷಯ ಪೂರ್ತಿ ಮರೆತುಹೋಗುವ ಸ್ಥಿತಿಗೆ ಬರಬಹುದು. ಈಗಲೇ ಇಷ್ಟು ಬದಲಾವಣೆ ಬಂದರೂ ತಾಳಿ, ಕಾಲುಂಗುರ ತೆಗೆದು ಹಾಕುವುದರಲ್ಲಿ ಬದಲಾವಣೆ ಬಂದಿಲ್ಲ. ವಿಧವೆಯಾದವರು ಅವುಗಳನ್ನು ತೆಗೆದುಹಾಕುವುದರಿಂದ ಸಂಪ್ರದಾಯಗಳು ಇನ್ನು ಸ್ವಲ್ಪ ಉಳಿದಿವೆ ಎಂದು ಹೇಳಬಹುದು.

ಇಂದಿಗಾದರೂ ಇಂದೂಸಾಂಪ್ರದಾಯಗಳು ಇವು ಎಂದು ತಿಳಿದು, ಮುಂಡೆಮೋಸಿದವರು ಶುಭಕರರೆಂದು ಅಶುಭರು ಅಲ್ಲವೆಂದು ತಿಳಿಯಬೇಕು. ಅವರನ್ನು ಮಂಗಳಪ್ರದರಾಗಿ ಗೌರವಿಸಬೇಕು. ತಿಳಿಯದವರಿಗೆ ನೀವು ಈ ವಿಧವಾದ ಸೀರೆಗಳೇ ತೊಡಬೇಕೆಂದು ತಿಳಿಸಿ ಅವುಗಳಿಗೆ ಅರ್ಥ ವಿವರವನ್ನು ತಿಳಿಸಬೇಕು. ಆ ವಿಧವಾಗಿ ಮಾಡಿದಾಗ ನಮ್ಮಲ್ಲಿರುವ ಮನಸ್ಸನ್ನು ಕುರಿತು, ಅದಕ್ಕೆ ಸಂಬಂಧಿಸಿದ ಬ್ರಹ್ಮಯೋಗವನ್ನು ಕುರಿತು ತಿಳಿಯಬಲ್ಲರು. ಒಟ್ಟಿನಲ್ಲಿ ಮುಂಡೆಮುಚ್ಚಿ (ಮುಂಡೆಮೋಸ) ಕಾರ್ಯವು ಸಾಂಪ್ರದಾಯಬದ್ಧವಾದುದೆಂದು ತಿಳಿಯಬಹುದು.

ಸಾಂಪ್ರದಾಯಗಳ ಪ್ರಕಾರ ಮುಂಡೆಮೋಸಿದವರು ಯಾವ ಬಣ್ಣ ಸೀರೆ ಧರಿಸಬೇಕೆನ್ನುವುದಕ್ಕೆ ಅವರಿಗೆ ಮೊದಲೇ ನಾವು ಇಂತಹ ಜಾತಕದಲ್ಲಿ ಹುಟ್ಟಿದವರೆಂದು ತಿಳಿದಿರಬೇಕು. ಹಾಗೆ ಜಾತಕ ತಿಳಿದಿರಬೇಕೆಂದರೆ ಹುಟ್ಟಿದಾಗ ಅವರ ಹಿರಿಯರು ಶಿಶುವು ಅರಚಿದ ಅಥವಾ ಕದಲಿದ ಕಾಲವನ್ನು ಬರೆದಿಟ್ಟುಕೊಳ್ಳಬೇಕು. ಮುಖ್ಯ ಗಮನಿಕೆ ಏನೆಂದರೆ! ಶಿಶುವು ಹುಟ್ಟಿದ ಕಾಲವನ್ನು ಮಾತ್ರ ಗುರುತಿಸುಕೊಳ್ಳಬಾರದು. ಶಿಶುವು ಕದಲಿದ ಅಥವಾ ಅರಚಿದ ಕಾಲವನ್ನೇ ಬರೆದಿಟ್ಟುಕೊಂಡು ನಂತರ ಪುರೋಹಿತರಿಗೆ ತೋರಿಸಿದರೆ, ಹುಟ್ಟಿದ ಶಿಶುವು ಈ ಕಡೆ ಶುಕ್ರಗ್ರಹಕ್ಕೆ ಸಂಬಂಧಿಸಿರುವುದಾ ಅಥವಾ ಕುಜಗ್ರಹಕ್ಕೆ ಸಂಬಂಧಿಸಿರುವುದಾ ಎಂದು ತಿಳಿಯುತ್ತದೆ. **ಶುಕ್ರಗ್ರಹ ಜಾತಕರಿಗೆ ಬಿಳಿ ಬಣ್ಣ, ಕುಜಗ್ರಹ ಜಾತಕರಿಗೆ ಕೆಂಪು ಬಣ್ಣ ಯೋಗ್ಯವೆಂದು ತಿಳಿಯಬೇಕು**. ಬ್ರಹ್ಮವಿದ್ಯೆಗೆ ಅಂದರೆ ದೈವಜ್ಞಾನಕ್ಕೆ ಹತ್ತಿರವಾಗಿರುವುದು ಜೋತಿಷ್ಯ ಆದ್ದರಿಂದ ಕೆಲವು ಸಾಂಪ್ರದಾಯಗಳು ಜೋತಿಷ್ಯಶಾಸ್ತ್ರದೊಂದಿಗೆ ಸಂಬಂಧ ಇರುವವೆಂದು ತಿಳಿಯಬೇಕು.



# ನಮಸ್ಕಾರ

ದೈವತ್ವವನ್ನು ಮಾನವರಲ್ಲಿ ಅಳವಡಿಸಿ, ದೈವಜ್ಞಾನವನ್ನು ಎಂದಿಗೂ ಮರೆತು ಹೋಗದಂತೆ ಮಾನವರಲ್ಲಿ ಇಟ್ಟಿರುವ ಎಷ್ಟೋ ಆಚರಣೆಗಳಲ್ಲಿನ ನಮಸ್ಕಾರ ಮಾಡುವುದು ಒಂದು ಒಳ್ಳೆಯ ಸಂಪ್ರದಾಯ. ಯಾವ ಇತರ ಮತಗಳು ಇಲ್ಲದ ಕಾಲದಲ್ಲಿ, ಇಂದೂಮತ ಒಂದೇ ಇದ್ದ ಕಾಲದಲ್ಲಿ, ದೈವಜ್ಞಾನ ತಿಳಿದ ಹಿರಿಯರು ಏರ್ಪಡಿಸಿದ ನಮಸ್ಕಾರ ಸಾಂಪ್ರದಾಯ ಇಂದೂ ಮತ ಅನೇಕವಾಗಿ ಸೀಳಿಹೋದರೂ ಎಲ್ಲ ಮತಗಳಲ್ಲಿಯೂ ಸ್ವಲ್ಪ ಮಟ್ಟಿಗೆ ಉಳಿದುಕೊಂಡಿದೆ. ಎಲ್ಲ ಮತಗಳಲ್ಲಿಯೂ ನಮಸ್ಕಾರ ಸಾಂಪ್ರದಾಯವಿದ್ದರೂ ಅದರಲ್ಲಿ ಪೂರ್ವಕಾಲದಲ್ಲಿರುವ ಅರ್ಥವಾಗಲಿ, ಭಾವವಾಗಲಿ ಇಲ್ಲ. ಒಂದೊಂದು ಮತದಲ್ಲಿ ಒಂದೊಂದು ಭಾವವು ಬೆರೆತುಹೋಗಿ ಯಾವುದು ಸರಿಯಾದ ಭಾವವೋ ಅರ್ಥವಾಗದಂತಾಗಿದೆ. ಒಂದೊಂದು ಮತದವರು ಒಂದೊಂದು ರೀತಿಯಲ್ಲಿ ಅರ್ಥ ಹೇಳಿಕೊಳ್ಳುತ್ತಾ ಇತರ ಮತದವರನ್ನು ತಪ್ಪು ಹಿಡಿಯುವುದು ಪರಿಪಾಟವಾಗಿದೆ. ಇಂತಹ ಸಮಯದಲ್ಲಿ ಯಾರದು ಶಾಸ್ತ್ರಬದ್ಧವಾದ ಅರ್ಥವೋ, ಯಾರದು ದೈವಸಂಬಂಧವಾದ ನಮಸ್ಕಾರವೋ, ಯಾರದು ಪ್ರಪಂಚ ಸಂಬಂಧ ನಮಸ್ಕಾರವೋ ತಿಳಿಯಬೇಕಾದ ಅವಶ್ಯಕತೆ ಇದೆ. ಪ್ರತಿಯೊಂದು ಹೇತುಬದ್ಧವಾದ ಅರ್ಥದಿಂದ, ಶಾಸ್ತ್ರಬದ್ಧವಾದ ಆಚರಣೆಯಿಂದ ಇದ್ದಾಗಲೆ ಮನುಷ್ಯ ಮಾಡಿದ ಕೆಲಸಕ್ಕೆ ಸಾರ್ಥಕತೆ ಇರುತ್ತದೆನ್ನುವುದು ನಮ್ಮ ವಾದ. ಆದ್ದರಿಂದ ಮೊಟ್ಟಮೊದಲು ಇರುವ ಇಂದೂ (ಜ್ಞಾನ) ಸಾಂಪ್ರದಾಯ ಏನೆಂಬುವುದನ್ನು ನಾವು ನೋಡಬೇಕು.

ಪ್ರಪಂಚಕ್ಕೆಲ್ಲ ದೇವರು ಒಬ್ಬನೇ ಎನ್ನುವುದು ಸತ್ಯ. ಯಾರು ಯಾವ ಮತದಲ್ಲಿದ್ದರೂ ಆ ಮತ ಸಾರಾಂಶ ದೇವರನ್ನು ತಿಳಿಸುವುದಾಗಿ ಇರುತ್ತದೆ. ಆದ್ದರಿಂದ ಪ್ರತಿ ಮತಗಳಲ್ಲಿನ ಗ್ರಂಥಗಳನ್ನು, ಆ ಮತ ಹಿರಿಯರನ್ನು ಗೌರವಿಸುವುದು ಒಳ್ಳೆಯ ಪದ್ಧತಿಯಾಗಿಯೇ ಭಾವಿಸುತ್ತೇವೆ. ಅಂತಹ ಭಾವದಿಂದಲೇ ಇಸ್ಲಾಂ ಮತ ಹಿರಿಯರೊಂದಿಗೆ ಒಂದು ಬಾರಿ ನಾವು ಭೇಟಿ ಮಾಡುವುದು

ನಡೆದಿದೆ. ಹೈದರಾಬಾದ್ ನಗರದಲ್ಲಿ ಇಸ್ಲಾಂ ಮತದಲ್ಲಿನ ಹದೀಸ್ ಪಂಡಿತರೊಂದಿಗೆ, ಪವಿತ್ರ ಖುರಾನ್‌ನನ್ನು ತಮ್ಮಲ್ಲಿ ಪೂರ್ತಿ ಜೀರ್ಣಿಸಿ ಕೊಂಡಿರುವ ಹಿರಿಯರೊಂದಿಗೆ ಬೇಟಿಯಾಗುವುದು ನಮಗೆಷ್ಟೋ ಸಂತೋಷ ದಾಯಕವಾದ ಸಂಘಟನೆಯಾಗಿಯೇ ತಿಳಿಯುತ್ತೇವೆ. ಅಂತಹ ದೈವಜ್ಞಾನ ಸಂಪನ್ನರು, ದೇವರಿಗೆ ಮುದ್ದು ಮಕ್ಕಳಾದವರನ್ನು ಬೇಟಿಯಾದಾಗ ಅವರಿಗೆ ಸಮಸ್ಕಾರ ಹೇಳಿದ್ದೇವೆ. ಮತ್ತೆ ಅಲ್ಲಿಂದ ಹೊರಟು ಬರುವಾಗ ಸಹ ನಮಸ್ಕಾರ ಹೇಳಿದ್ದೇವೆ. ಮೊದಲು ನಮಸ್ಕಾರ ಹೇಳಿದಾಗ ಅವರೇನು ಅನ್ನಲಿಲ್ಲ. ಆದರೆ ಹೊರಟು ಬರುವಾಗ ಹೇಳಿದ ನಮಸ್ಕಾರಕ್ಕೆ ಸ್ವಲ್ಪ ಅಭ್ಯಂತರ ತಿಳಿಸಿದರು. ಅವರಿಗೆ ದೇವರ ಮೇಲಿರುವ ಅಪಾರ ವಿಶ್ವಾಸ ಆ ಮಾತುಗಳಲ್ಲಿ ನಮಗರ್ಥ ವಾಗಿದೆ. ಅವರು ನಮ್ಮೊಂದಿಗೆ ಮಾತನಾಡಿದ ವಿಷಯ ಹೀಗಿದೆ.

**ಇಸ್ಲಾಂ ಮತ ಹಿರಿಯರು :–** "ಹಿಂದೂ ಮತದಲ್ಲಿ ಉಳಿದ ಎಲ್ಲರಿಗಿಂತಲೂ ನೀವು ನಮಗೆ ಬಹಳ ಒಪ್ಪಿಗೆಯಾಗಿದ್ದೀರ. ತೌಹೀದ್‌ನು (ಏಕೇಶ್ವರೋ ಪಾಸನವನ್ನು) ಕುರಿತು ನೀವು ಹೇಳಿದಂತೆ ಹಿಂದೂಮತದಲ್ಲಿ ಯಾರು ಹೇಳಲಿಲ್ಲ. ತೌಹೀದ್ ಜ್ಞಾನವನ್ನು ಕುರಿತು ಇಷ್ಟೊಂದು ತಿಳಿಸಿರುವ ನೀವು ಸಾಟಿ ಮನುಷ್ಯರಾದ ನಮಗೆ ನಮಸ್ಕಾರ ಹೇಳುವುದು ಒಳ್ಳೆಯದಲ್ಲ. ನಾವು ನಮಸ್ಕರಿಸಬೇಕಾಗಿರುವುದು ಒಬ್ಬ ದೇವರಿಗೆ ಮಾತ್ರವೆ. ಆತನೊಬ್ಬನೇ ನಮಸ್ಕಾರಕ್ಕೆ ಅರ್ಹನು. ಮನುಷ್ಯ ಮನುಷ್ಯನಿಗಾಗಲಿ, ಮತ್ತೆ ಯಾವುದಕ್ಕಾಗಲಿ ನಮಸ್ಕಾರ ಹೇಳುವುದು ದೇವರನ್ನು ತಿರಸ್ಕರಿಸಿದಂತಾಗುತ್ತದೆ. ಎಲ್ಲರಿಗೂ ಹಿರಿಯನು, ಎಲ್ಲರನ್ನು ಸೃಷ್ಟಿಸಿದ ದೇವರನ್ನು ಬಿಟ್ಟು ಸಾಧಾರಣ ಮನುಷ್ಯನಿಗೆ ನಮಸ್ಕರಿಸುವುದು ನಮ್ಮ ಲೆಕ್ಕದಲ್ಲಿ ತಪ್ಪಾಗಿ ಭಾವಿಸುತ್ತೇವೆ. ಮನುಷ್ಯ ಮಾಡುವ ನಮಸ್ಕಾರಕ್ಕೆ ದೇವರೊಬ್ಬನೇ ಅರ್ಹನು. ಆದ್ದರಿಂದ ಆತನಿಗೆ ಬಿಟ್ಟು ಇತರರಿಗೆ ನಮಸ್ಕರಿ ಸುವುದು ಸರಿಯಾದ ಪದ್ಧತಿಯಲ್ಲ ಅಂದರು.

**ನಮ್ಮ ಮಾತು :–** "ನಮಸ್ಕಾರಕ್ಕೆ ಅರ್ಹನು ದೇವರೊಬ್ಬನೇ ಎಂಬ ಮಾತನ್ನು ನಾವು ಅಂಗೀಕರಿಸುತ್ತಿದ್ದೇವೆ. ಇತರರಿಗೆ ಏಕೆ ನಮಸ್ಕರಿಸುತ್ತಿದ್ದೇವೊ ನಾನು

ನಂತರ ಹೇಳುತ್ತೇನೆ. ಅದಕ್ಕಿಂತ ಮೊದಲು ನಾನು ನಿಮ್ಮನ್ನು ಕೇಳುವುದೇ ನೆಂದರೆ! ನೀವು ಇತರರಿಗೆ **"ಸಲಾಮ್ ಲೇಕುಮ್"** ಎಂದು ಹೇಳುತ್ತಾ ಕೈಯನ್ನು ತಲೆ ಕಡೆ ತೋರಿಸುತ್ತಾ ಎನ್ನುತ್ತೀರ ಎದುರಿಗಿರುವ ವ್ಯಕ್ತಿಯೂ ಸಹ **"ವಲೇಕುಮ್ ಸಲಾಮ್"** ಎನ್ನುತ್ತಾರೆ. ಅದು ಇತರರಿಗೆ ನಮಸ್ಕಾರವಲ್ಲವೆ! ದೇವರಿಗೆ ಹೊರತು ಮನುಷ್ಯರಿಗೆ ನಮಸ್ಕಾರ ಹೇಳಬಾರದೆಂಬ ಹದೀಸು (ನೀತಿ) ಪ್ರಕಾರ ಸಲಾಮ್ ಇತರರಿಗೆ ಹೇಳುವುದು ತಪ್ಪಲ್ಲವೆ" ಎಂದೆವು.

**ಇಸ್ಲಾಂ ಮತ ಹಿರಿಯರು :–** "ಸಲಾಮ್ ಹೇಳುವ ವಿಧಾನದಲ್ಲಿ ತಪ್ಪಿಲ್ಲ. ಅದು ಇತರರಿಗೆ ನಮಸ್ಕರಿಸಿದಂತಲ್ಲ. ಸಲಾಮ್ ಹೇಳುವ ವಿಧಾನವನ್ನು ಹಜರತ್ ಮಹಾಮ್ಮದ್ ಪ್ರವಕ್ತರೇ ತಿಳಿಸಿದ್ದಾರೆ. "ಸಲಾಮ್ ಲೇಕುಮ್" ಎಂದರೆ ನಿನಗೆ ಶುಭವಾಗಲಿ ಎಂದು ಅರ್ಥ. ಎದುರಿನ ವ್ಯಕ್ತಿ ಸಲಾಮ್ ಹೇಳಿದ ವ್ಯಕ್ತಿಗೆ "ವಲೆಕುಮ್ ಸಲಾಮ್" ಎಂದು ಹೇಳುವುದು ಪ್ರತಿ ಸಲಾಮ್ ಮಾಡಿದಂತಾ ಗುತ್ತದೆ. "ವಲೆಕುಮ್ ಸಲಾಮ್" ಎನ್ನುವುದರಲ್ಲಿ ನಿನಗೂ ಸಹ ಶುಭವಾಗಲಿ ಎಂದು ಅರ್ಥವಾಗಲಿ ಒಬ್ಬರಿಗಾಗಿ ನಮಸ್ಕರಿಸಿಕೊಂಡಂತೆ ಅಲ್ಲ. ನಮ್ಮ ಮತದಲ್ಲಿ ಒಬ್ಬರಿಗೊಬ್ಬರು ಶುಭವನ್ನು ತಿಳಿಸಿಕೊಳ್ಳುವ ಸಲುವಾಗಿ ಸಲಾಂ ಹೇಳಿಕೊಳ್ಳುವುದು ಇದೆ. ಆದರೆ ಸಲಾಮ್ ಹೇಳುವುದು ನಮಸ್ಕಾರ ವಿಧಾನವಲ್ಲ" ಎಂದರು.

**ನಮ್ಮ ಮಾತು :–** ಇಂದೂ ವಿಧಾನದಲ್ಲಿ ಪೂರ್ವಕಾಲದಲ್ಲಿಯೇ ಜ್ಞಾನಿಗಳಾದ ಹಿರಿಯರು ನಮಸ್ಕಾರವನ್ನು ಪ್ರವೇಶ ಮಾಡಿದ್ದಾರೆ. ಅಂದಿನ ಹಿರಿಯರು ಹೇಳಿರುವ ಪ್ರಕಾರ ಎರಡು ಕೈಗಳೆತ್ತಿ ನಮಸ್ಕರಿಸುವುದು ನಮಸ್ಕಾರ ಮಾಡಿದಂತಾ ಗುತ್ತದೆ. ನಮಸ್ಕಾರ ಪೂಜ್ಯ ಭಾವವಾದುದು ಮತ್ತು ಗೌರವ ಸೂಚಕವಾದುದೆಂದು ಹೇಳುವುದರಲ್ಲಿ ಸತ್ಯವಿದೆ. ನೀವು ಹೇಳಿದ ಸಲಾಂನಲ್ಲಿ ಶುಭಕರವಿದ್ದಂತೆ ಇಂದೂ ವಿಧಾನದಲ್ಲಿನ ನಮಸ್ಕಾರದಲ್ಲಿ ಪೂಜ್ಯಭಾವವಿದೆ ಯೆಂದೇ ಹೇಳಬಹುದು. ದೇವರನ್ನಲ್ಲದೆ ಇತರರ ಮೇಲೆ ಪೂಜ್ಯಭಾವ ತೋರಿಸುವುದು ಒಳ್ಳೆಯದಲ್ಲವೆಂದೇ ಹೇಳಬಹುದು. ಆದರೂ ಇಲ್ಲಿ ನಾವು ಸ್ವಲ್ಪ ಆಲೋಚಿಸಬೇಕಾದ ಅವಶ್ಯಕತೆ ಇದೆ. ಪೂರ್ವದಲ್ಲಿ ದೈವಜ್ಞಾನದಲ್ಲಿ ಅಗ್ರಗಣ್ಯರಾದವರು, ದೈವವೆಂದರೇ ಯಾರು

ಅದರ ಶ್ರೇಷ್ಠತ್ವವನ್ನು ತಿಳಿದವರು, ಪವಿತ್ರವಾದ ಪೂಜ್ಯಭಾವವಾದ ನಮಸ್ಕಾರವನ್ನು ಮನುಷ್ಯರ ಮಧ್ಯದಲ್ಲಿ ಏಕೆ ಕಲ್ಪಿಸಿದ್ದಾರೆಂದು ಯೋಚಿಸಬೇ ಕಾಗಿದೆ. ಆಗಿನ ಅವರ ಭಾವವೇನೋ, ಜ್ಞಾನದ ಪ್ರಕಾರ ಅವರ ಉದ್ದೇಶವೇನೋ ವಿವರಿಸಿಕೊಂಡು ನೋಡಿದಂತಾದರೆ ಈ ವಿಧವಾಗಿ ಇದೆ.

ಈ ಪ್ರಪಂಚವನ್ನು ಸೃಷ್ಟಿಸಲ್ಪಟ್ಟ ನಂತರ ಮೊದಲು ಯಾವ ಮತಗಳು ಇಲ್ಲ. ಮತವೆಂಬ ಹೆಸರೇ ಇಲ್ಲದ ಆ ಕಾಲದಲ್ಲಿ ದೈವಜ್ಞಾನವನ್ನು ತಿಳಿದಿರುವ ಹಿರಿಯರು ಇತರರು ಸಹ ದೈವಜ್ಞಾನವನ್ನು ತಿಳಿದುಕೊಳ್ಳುವಂತೆ ಅರ್ಥದಿಂದ ಕೂಡಿಕೊಂಡ ಕೆಲವು ಆಚರಣೆಗಳನ್ನು ಮನುಷ್ಯರಲ್ಲಿ ಪ್ರವೇಶ ಇಟ್ಟಿದ್ದಾರೆ. ಆ ಆಚರಣೆಗಳಲ್ಲಿ ನಮಸ್ಕಾರವೂ ಸಹ ಒಂದು. ಆ ದಿನ ವಿಶ್ವವ್ಯಾಪ್ತವಾದ ಮನುಷ್ಯರಲ್ಲಿ ಇತರ ಮತವೆನ್ನುವುದಿಲ್ಲ. ಇರುವುದೆಲ್ಲ ಇಂದೂತ್ವವೇ (ಜ್ಞಾನವೇ) ಇಂದೂತ್ವವು ಮನುಷ್ಯರ ಆಚರಣೆಗಳಲ್ಲಿ ಮುಖ್ಯವಾದ ಭಾಗವಾಗಿ ಇರುತ್ತಿತ್ತು. ಆದ್ದರಿಂದ ಪ್ರಪಂಚ ವ್ಯಾಪ್ತವಾಗಿ ನಮಸ್ಕಾರ ವಿಧಾನವು ಆಚರಣೆಯಲ್ಲಿರುತ್ತಿತ್ತು. ಭಾನುವಾರ ರಜಾದಿನವಾಗಿ ಪ್ರಪಂಚದಲ್ಲೆಲ್ಲ ಆಗಲೂ ಈಗಲೂ ಹೇಗೆ ಇದೆಯೋ ಹಾಗೆಯೇ ನಮಸ್ಕಾರ ಪ್ರಪಂಚದಲೆಲ್ಲ ಇರುತ್ತಿತ್ತು. ಇಂದಿಗೂ ಭಾನುವಾರ ರಜಾ ದಿನವಾಗಿ ಪ್ರಪಂಚದಲ್ಲಿನ ಎಲ್ಲಾ ದೇಶಗಳಲ್ಲಿ ಇದ್ದರೂ ಪ್ರತ್ಯೇಕಿಸಿ ಆ ದಿನವನ್ನೇ ರಜೆಯನ್ನು ಏಕೆ ಘೋಷಿಸಿದ್ದಾರೋ ತಿಳಿಯದಂತೆ ಹೋದ ಹಾಗೆ, ಇಂದಿಗೂ ಪ್ರಪಂಚವ್ಯಾಪ್ತಿಯಾಗಿ ನಮಸ್ಕಾರ ಆಚರಣೆಯಲ್ಲಿದ್ದರೂ ಪೂರ್ವ ಕಾಲದಲ್ಲಿ ನಮಸ್ಕಾರವನ್ನು ಯಾವ ಉದ್ದೇಶದಿಂದ ಇಟ್ಟಿದ್ದಾರೋ ತಿಳಿಯದಂತಾಗಿದೆ. ಜ್ಞಾನದಿಂದ ಕೂಡಿಕೊಂಡ ಅರ್ಥದಿಂದ, ದೈವತ್ವ ಭಾವದಿಂದ ಎರಡು ಕೈಗಳಿಂದ ಮಾಡುವ ನಮಸ್ಕಾರ ಕೆಲವು ದೇಶಗಳಲ್ಲಿ ಒಂದುಕೈ ವರೆಗೆ ಪರಿಮಿತವಾಗಿದೆ.

ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ವಿಶ್ವವ್ಯಾಪ್ತವಾದ ನಮಸ್ಕಾರ ಸಾಂಪ್ರದಾಯದಲ್ಲಿ ಆಚರಣಾಲೋಪವೇರ್ಪಟ್ಟು ಒಂದೇ ಕೈಯಿ ನಮಸ್ಕಾರವಾದರೂ ಆ ಒಂದು ಕೈಯನ್ನು ಎಲ್ಲರೂ ತಲೆಯ ಕಡೆ ತೋರಿಸು

ವುದು ಮಾತ್ರ ಮಾಸಿ ಹೋಗದಂತೆ ನಿಂತು ಹೋಗಿದೆ. ಇಂದೂ ಸಾಂಪ್ರದಾಯದ ಪ್ರಕಾರ ಎರಡು ಕೈಗಳ ಹಸ್ತಗಳನ್ನು ಜೋಡಿಸಿ ತಲೆಯ ಕಡೆ ತೋರಿಸುವುದು ಸರಿಯಾದ ನಮಸ್ಕಾರದ ಸಾಂಪ್ರದಾಯ. ಅಂತಹ ಸಂಪೂರ್ಣ ನಮಸ್ಕಾರ ಪ್ರಸ್ತುತ ಕಾಲದಲ್ಲಿ ಭೂಮಿಮೇಲೆ ಎಷ್ಟು ಮತಗಳು ಉದ್ಭವಿಸಿದರೂ ಎಲ್ಲ ಮತಗಳಲ್ಲಿಯೂ ಸ್ವಲ್ಪಕ್ಕೆ ಸ್ವಲ್ಪವಾದರೂ ಉಳಿದುಕೊಂಡಿದೆ. ಎಲ್ಲ ಮತಗಳ ನಮಸ್ಕಾರಗಳಲ್ಲಿಯೂ ತಲೆಗೇ ಪ್ರಾಧಾನ್ಯತೆ ಇರುವುದು, ಕೆಲವು ಮತಗಳಲ್ಲಿ ನಮಸ್ಕಾರ ಒಂದು ಕೈಯಿಗೆ ಪರಿಮಿತಿ ಯಾಗಿರುವುದನ್ನು ನೋಡುತ್ತಿದ್ದರೆ ನಮಸ್ಕಾರ ಎನ್ನುವುದು ಮಾತ್ರ ಪೂರ್ತಿ ನಶಿಸದಂತೆ ಇದೆ ಎಂದು ತಿಳಿಯುತ್ತದೆ. ಯಾವುದು ಏನಾದರೂ ಪೂರ್ವಕಾಲದಲ್ಲಿ ಇಂದೂಗಳು ಇಟ್ಟಿರುವ ಸಾಂಪ್ರದಾಯಗಳಲ್ಲಿ ನಮಸ್ಕಾರದ ಅರ್ಥ ಕೆಟ್ಟಿರುವುದಾಗಿ ಎಲ್ಲ ದೇಶಗಳಲ್ಲಿ ಇಂದಿಗೂ ನಿಂತಿದೆ. ಒಂದೊಂದು ಮತದಲ್ಲಿ ಒಂದೊಂದು ಅರ್ಥದಿಂದ ಇದ್ದರೂ ಅದನ್ನು ಪೂರ್ವಪದ್ಧತಿ ಪ್ರಕಾರ ನಮಸ್ಕಾರವೆಂದೇ ಹೇಳಬಹುದು. ಅದಕ್ಕೂ ಪೂರ್ವದಲ್ಲಿ ಇಂದೂಗಳು ನಮಸ್ಕಾರದಲ್ಲಿ ಅಳವಡಿಸಿದ ಅರ್ಥವೇನು? ನಮಸ್ಕಾರ ಎರಡು ಕೈಗಳ ಹಸ್ತಗಳಿಂದಲೇ ಏಕೆ ಮಾಡುತ್ತಿದ್ದರು? ಹಸ್ತಗಳ ಬೆರಳಿನಕೊನೆಗಳನ್ನು ತಲೆಕಡೆ ಏಕೆ ಇಡುತ್ತಿದ್ದರು? ಎಂಬ ಮೊದಲಾದ ಪ್ರಶ್ನೆಗಳಿಗೆ ಉತ್ತರಗಳು ತಿಳಿದುಕೊಂಡ ನಂತರ ನಮಸ್ಕಾರದ ಸಾಂಪ್ರದಾಯವು ಪೂರ್ತಿ ಅರ್ಥವಾಗಬಲ್ಲದು.

ಈ ದಿನ ಇರುವ ಎಲ್ಲ ಮತಗಳಿಗೂ, ಪೂರ್ವದಲ್ಲಿದ್ದ ಒಂದೇ ಇಂದೂ ಮತಕ್ಕೆ ದೇವರು ಒಬ್ಬನೇ. ಒಬ್ಬ ದೇವರೇ ಪ್ರಪಂಚವೆಲ್ಲವನ್ನು ಸೃಷ್ಟಿಸಿದ ಸೃಷ್ಟಿಕರ್ತ. ದೇವರಿಗೆ ವಾಸ್ತವವಾಗಿ ಹೆಸರು ಇಲ್ಲ, ಆಕಾರವೂ ಇಲ್ಲ, ಒಂದು ಸ್ಥಳವಂತು ಇಲ್ಲ. ಒಂದು ಹೆಸರು ಒಂದು ಆಕಾರ, ಒಂದು ಸ್ಥಳವಿಲ್ಲದ ದೇವರು ವಿಶ್ವವ್ಯಾಪ್ತವಾಗಿ ಅಣುಅಣುವಿನಲ್ಲೂ ವ್ಯಾಪಿಸಿದ್ದಾನೆ. ಹೆಸರಿಲ್ಲದ ಹೆಸರೆನ್ನಲಾದ ಪರಮಾತ್ಮ, ಪುರುಷೋತ್ತಮ, ಖುದಾ, ಸೃಷ್ಟಿಕರ್ತ, ಪರಂಧಾಮ ಎನ್ನುವ ಗುರುತಿನಿಂದ ಹೇಳಲ್ಪಡುತ್ತಿದ್ದಾನೆ. ಅಂತಹ ದೇವರು ಪ್ರಕೃತಿಯೆಲ್ಲಾ

ಆವರಿಸಿಕೊಂಡಿರುವುದೇ ಅಲ್ಲದೆ ಜೀವರಾಶಿಗಳ ಶರೀರಗಳ ಒಳಗೂ ಸಹ ಪ್ರತಿ ಅಣುವಿನಲ್ಲೂ ವ್ಯಾಪಿಸಿದ್ದಾನೆ. ಪರಮಾತ್ಮ ಆತ್ಮನಾಗಿ ಶರೀರದಲ್ಲಿ ಚೈತನ್ಯವನ್ನು ಉಂಟುಮಾಡಿ ಶರೀರಗಳನ್ನು ಕದಲಿಸುತ್ತಾ ಕೆಲಸ ಮಾಡಿಸುತ್ತಿದೆ. ಪರಮಾತ್ಮನ ಭಾಗವಾದ ಆತ್ಮ ಪ್ರತಿ ಜೀವರಾಶಿ ಶರೀರಗಳಲ್ಲಿಯೂ ತಲೆಯಲ್ಲಿ ಕೇಂದ್ರೀಕೃತವಾಗಿ ಶರೀರವೆಲ್ಲಾ ವ್ಯಾಪಿಸಿ ಇದೆ. ದೇವರು ಆತ್ಮರೂಪದಿಂದ ಮನುಷ್ಯರಿಗೆ ತಿಳಿಯುವ ಚೈತನ್ಯವಾಗಿ ತಲೆಯಲ್ಲಿರುವುದರಿಂದ, ಆ ವಿಷಯ ಎಲ್ಲರಿಗೂ ತಿಳಿಯುವಂತೆ ದೇವರು ತಲೆಯಲ್ಲಿದ್ದಾನೆಂಬ ವಿಷಯ ಯಾರು ಮರೆತು ಹೋಗದಂತಿರಲು ತನಗಿಂತಲೂ ದೊಡ್ಡವರು ಕಾಣಿಸಿದಾಗ ನಮಸ್ಕಾರ ಹೇಳುವುದು ಇದೆ. ಎದುರಿಗಿರುವ ಮನುಷ್ಯನಿಗೆ ನಮಸ್ಕಾರ ಹೇಳುವಾಗ ಎದುರಿಗಿರುವವನ ತಲೆಯಲ್ಲಿನ ಆತ್ಮವನ್ನು ಗುರುತು ಮಾಡುವಂತೆ ಎರಡು ಕೈಗಳನ್ನು ಜೋಡಿಸಿ ತಲೆಯ ಕಡೆ ನಮಸ್ಕಾರ ಇಡುತ್ತಿದ್ದರು. ಬಲ ಎಡ ಎರಡು ಕೈಗಳ ಹಸ್ತಗಳನ್ನು ಜೋಡಿಸುವುದರಲ್ಲಿ ಆಧ್ಯಾತ್ಮಿಕವಾದ ಅರ್ಥವಿದೆ. ಎಡಬಲ ಭಾಗಗಳಾಗಿರುವ ಶರೀರದಲ್ಲಿ ಒಂದೇ ಆತ್ಮ ಎರಡು ಕಡೆಗೂ ವ್ಯಾಪಿಸಿಕೊಂಡಿದೆ ಎಂದು ತಿಳಿಸುವ ಸಲುವಾಗಿ ಎರಡು ಕೈಗಳನ್ನೂ ಒಂದಾಗಿ ಮಾಡಿ ತೋರಿಸುತ್ತಿದ್ದೇವೆ. ಶರೀರ ವನ್ನೆಲ್ಲಾ ವ್ಯಾಪಿಸಿದ ಆತ್ಮಗೆ ತಲೆ ಕೇಂದ್ರವಾಗಿರುವುದರಿಂದ ತಲೆಯ ಕಡೆ ಕೈಗಳ ಕೊನೆಗಳನ್ನು ತೋರಿಸುವುದು ನಡೆಯುತ್ತದೆ. ಪೂರ್ವದ ಹಿರಿಯರು ನಿರ್ಮಿಸಿದ ನಮಸ್ಕಾರದಲ್ಲಿ ದೈವದ ಬಗ್ಗೆ ಪೂಜ್ಯ ಭಾವ ತುಂಬಿರುತ್ತಿತ್ತು. ಒಬ್ಬರು ಶರೀರದೊಳಗಿನ ದೈವವನ್ನು ನಮಸ್ಕಾರ ರೂಪದಿಂದ ಎದುರಿಗಿರುವ ವ್ಯಕ್ತಿಗೆ ತಿಳಿಸಿದಾಗ ಎದುರಿಗಿರುವ ವ್ಯಕ್ತಿಯೂ ಸಹ ಅದೇ ರೀತಿಯಲ್ಲಿ ಎರಡು ಕೈಗಳಿಂದ ನಮಸ್ಕರಿಸುತ್ತಿದ್ದನು. ಹಾಗೆ ಮಾಡುವಾಗ ನಿನ್ನಲ್ಲಿ ನನ್ನಲ್ಲಿ ಒಂದೇ ಅಂಶವಾದ ದೇವರಿದ್ದಾನೆಂದು, ಆತನು ನಿನ್ನಲ್ಲಿ ಹೇಗೆ ಇದ್ದಾನೋ ನನ್ನಲ್ಲಿಯೂ ಸಹ ಹಾಗೆಯೇ ಇದ್ದಾನೆಂದು ತಿಳಿಸುವ ಅರ್ಥದಿಂದ ಪ್ರತಿ ನಮಸ್ಕಾರ ಮಾಡುತ್ತಿದ್ದರು. ಎಷ್ಟೋ ಉನ್ನತವಾದ ದೈವಭಾವನೆಯಿಂದ ಆದಿನ ನಮಸ್ಕಾರ, ಪ್ರತಿ ನಮಸ್ಕಾರಗಳಿರುತ್ತಿದ್ದವು.

ಅಷ್ಟೇ ಅಲ್ಲದೆ ಇಂದೂ ಸಾಂಪ್ರದಾಯಗಳಲ್ಲಿ ನಮಸ್ಕಾರದ ವಿಷಯದಲ್ಲಿ ಮತ್ತೊಂದು ಘಟ್ಟವೂ ಸಹ ಇದೆ. ಅದೇನೆಂದರೆ! ಮಾನವನ ಶರೀರದಲ್ಲಿ ನೀಚವಾದವು ಕಾಲುಗಳೆಂದೂ, ಕಾಲುಗಳಿಗೆ ಹಾಕುವ ಚಪ್ಪಲಿಗಳು ಸಹ ನೀಚವಾದವುಗಳೆಂದೂ ತಿಳಿಯುವುದು ಇದೆ. ಚಪ್ಪಲಿ ಹಾಕಿದ ಕಾಲುಗಳಾಗಲಿ, ಹಾಕದ ಕಾಲುಗಳಾಗಲಿ ಇತರ ವ್ಯಕ್ತಿಗಳಿಗೆ ತಾಕಿದಾಗ, ತಾಕಿರುವುದು ಎದುರಿ ಗಿರುವ ವ್ಯಕ್ತಿಗೆ ಆದರೂ, ಅವನನ್ನು ಅಂಟಿಕೊಂಡುರುವ ದೇವರಿಗೇ ತಗುಲಿದಂತೆ ಪೂರ್ವಕಾಲದಲ್ಲಿ ತಿಳಿಯುತ್ತಿದ್ದರು. ಹಾಗೆ ತಿಳಿಯುವುದರಿಂದ ಕೂಡಲೆ ತನ್ನದು ತಪ್ಪೆನ್ನುವಂತೆ ತಾಕಿದ ವ್ಯಕ್ತಿಯನ್ನು ಕೈಯಿಂದ ಮುಟ್ಟಿ ತಲೆಯ ಕಡೆ ಕೈ ಹೋಗಿಸಿ ನಮಸ್ಕರಿಸುತ್ತಿದ್ದರು. ಎದುರಿಗಿರುವ ವ್ಯಕ್ತಿ ಎಂತಹವನಾದರೂ ಕಾಲು ತಗುಲಿದ ಕೂಡಲೆ ನಮಸ್ಕರಿಸುವ ಆಚರಣೆ ಪೂರ್ವಕಾಲದ ಜ್ಞಾನಿಗಳೇ ಇಟ್ಟಿದ್ದಾರೆ. ಹಾಗೆ ಮಾಡುವುದರಿಂದ ತಮ್ಮ ಶರೀರದಲ್ಲಿಯೇ ಅಲ್ಲದೆ ಎದುರಿಗಿರುವ ಶರೀರದಲ್ಲಿಯೂ ಸಹ ದೇವರಿದ್ದಾನೆಂದೂ, ಆ ದೇವರ ಬಗ್ಗೆ ದೊಡ್ಡ ಭಕ್ತಿ ಇಟ್ಟುಕೊಂಡಿದ್ದೇನೆಂದೂ ತಿಳಿಸುವ ಸಲುವಾಗಿ ಪೂರ್ವದಲ್ಲಿ ಮಾಡುತ್ತಿದ್ದರು. ಪೂರ್ವಕಾಲದ ಆಚರಣೆ ಇಂದಿಗೂ ಅಲ್ಲಲ್ಲಿ ಇದೆ. ಬಸ್ಸಿನಲ್ಲಿಯೊ ಅಥವಾ ರೈಲಿನಲ್ಲಿಯೊ ಎದುರಿನ ಮನುಷ್ಯನಿಗೆ ಕಾಲು ತಗುಲಿದರೆ ಕೈಯಿಂದ ಆ ವ್ಯಕ್ತಿಯನ್ನು ಮುಟ್ಟಿ ಮುಗಿಯುವುದು ಆಗಾಗ ನೋಡುತ್ತಲೇ ಇದ್ದೇವೆ. ಪೂರ್ವದ ಹಿರಿಯರು ಎಷ್ಟೋ ಜ್ಞಾನದಿಂದ ದೈವ ಭಕ್ತಿ ಅಡಗಿರುವಂತೆ ಅಳವಡಿಸಿದ ಸಾಂಪ್ರದಾಯವೇ ನಮಸ್ಕಾರ.

ಪೂರ್ವದಲ್ಲಿ ದೈವದ ಬಗ್ಗೆ ವಿನಯ ವಿಧೇಯತೆಗಳು ಹೊಂದಿರು ವಂತೆ, ದೈವಜ್ಞಾನ ಎಲ್ಲರಿಗು ತಿಳಿಯುವಂತೆ, ಯಾರು ಯಾರಿಗೆ ನಮಸ್ಕಾರ ಮಾಡಿದರು ಅದು ದೇವರಿಗೆ ಸೇರುವಂತೆ ಅರ್ಥವನ್ನು ಅಳವಡಿಸಿ ಹಿರಿಯರು ಇಟ್ಟಿರುವ ಒಳ್ಳೆಯ ಕೆಲಸವೇ ನಮಸ್ಕಾರ. ಅಷ್ಟು ದೊಡ್ಡ ಭಾವದಿಂದ ತುಂಬಿರುವ ನಮಸ್ಕಾರ ಈ ದಿನ ದೇವರ ಬಗ್ಗೆ ಅಲ್ಲದೆ ಮಾನವರ ಬಗ್ಗೆ ಅಂದುಕೊಳ್ಳುವುದು ಪೂರ್ತಿ ತಪ್ಪು. ನಮಸ್ಕಾರಕ್ಕೆ ಅರ್ಹನು ದೇವರೊಬ್ಬನೇ ಹೊರತು ಇತರರು

ಅಲ್ಲ, ಆಗಬಾರದು, ಪೂರ್ವಕಾಲದಲ್ಲಿರುವ ಜ್ಞಾನ ಸಾಂಪ್ರದಾಯಗಳಿಗೆ ಅರ್ಥ ತಿಳಿಯದೆ ಹೋದಾಗ ಆಚರಣೆಗಳನ್ನು ನೋಡಿ ಯಾರಿಗೆ ಇಷ್ಟ ಬಂದಂತೆ ಅವರು ಅಂದುಕೊಳ್ಳಬಾರದು. ಪ್ರಸ್ತುತ ನಾನು ಮಾಡಿದ ನಮಸ್ಕಾರ ನಿಮಗಲ್ಲ ನಿಮ್ಮಲ್ಲಿರುವ ಅಲ್ಲಾಗೆ (ದೇವರಿಗೆ). ದೇವರಿಗೆ ಪೂಜ್ಯಭಾವದಿಂದ ನಮಸ್ಕರಿಸುವುದು ತಪ್ಪು ಹೇಗಾಗುತ್ತದೆ. ಸಲಾಂ ಪ್ರತಿ ಸಲಾಂ ಮಾಡುವುದರಲ್ಲಿ ಶುಭವಾಗಲಿ ಎಂದು ಆಶೀರ್ವದಿಸಿದಂತಾಗುತ್ತದೆ ಆದರೆ ದೈವ ಭಾವವಾಗಲಿ, ಇತರರಿಗೆ ದೇವರನ್ನು ಕುರಿತು ತಿಳಿಸುವ ವಿಧಾನವಾಗಲಿ ಇಲ್ಲವಲ್ಲಾ! ಅಲ್ಲಾ ಎಲ್ಲರಲ್ಲಿಯೂ ವ್ಯಾಪಿಸಿಕೊಂಡಿದ್ದಾನೆಂಬ ಅರ್ಥದಿಂದ ನಮಸ್ತೇ ಎಂದು ಹೇಳುವುದು ಒಳ್ಳೆಯದಲ್ಲವೆ! ನೀವೆ ಹೇಳಿರಿ.

ಇಂದೂಗಳ ಜ್ಞಾನದಲ್ಲಿ ದೈವ ನಿಮಿತ್ತ ಏರ್ಪಡಿಸಿದ ನಮಸ್ಕಾರ ಇಂದಿಗೂ ಇದೆ. ಅದೇ ಸಂಪ್ರದಾಯವೇ ಕಾಲ ಕಳೆದಂತೆಲ್ಲ, ಮತಗಳು ತಯಾರಾ ದಂತೆಲ್ಲ ಅನೇಕ ರೂಪಗಳಾಗಿ ಬದಲಾಗಿಹೋಗಿದೆ. ಇಂದೂಗಳು ಹಿಂದುಗ ಳಾಗಿ, ಮುಸ್ಲಿಮ್‌ರಾಗಿ, ಕ್ರೈಸ್ತವರಾಗಿ ಬದಲಾಗಿ ಹೋಗುವುದರಿಂದ ಆಗಿನ ಇಂದೂಗಳಲ್ಲಿದ್ದ ಅರ್ಥವು ಇಲ್ಲದಂತೆ ಹೋಗಿದೆ. ಹಿಂದುಗಳಲ್ಲಿ ಅಲ್ಲಲ್ಲಿ ಎರಡು ಕೈಗಳ ನಮಸ್ಕಾರ ಉಳಿದರೂ ಆ ದಿನದ ಇಂದೂಗಳ ಭಾವ ಇಲ್ಲ. ಆದ್ದರಿಂದ ಹಿಂದುಗಳಲ್ಲಿ ಸಹ ಅಧರ್ಮಯುಕ್ತವಾದ ಒಂದು ಕೈ ನಮಸ್ಕಾರಗಳು ಅಲ್ಲಲ್ಲಿ ಕಾಣಿಸುತ್ತಿವೆ. ಆದಿಯಲ್ಲಿರುವ ಇಂದೂಗಳು ಕಾಲಕ್ರಮೇಣ ಹಿಂದೂಗಳಾಗಿ, ಮುಸ್ಲಿಮ್‌ರಾಗಿ, ಕ್ರೈಸ್ತವರಾಗಿ ಬದಲಾಗಿ ಅವರಲ್ಲಿನ ನಮಸ್ಕಾರವೂ ಸಹ ರೂಪ ಅರ್ಥ ಬದಲಾಗಿ ಹೋಗಿದೆ. ಆಂಗ್ಲದೇಶಗಳಲ್ಲಿ ಸೆಲ್ಯೂಟಾಗಿ, ಅರಬ್ ದೇಶಗಳಲ್ಲಿ ಸಲಾಮ್ ಆಗಿ, ಭಾರತ ದೇಶದಲ್ಲಿ ನಮಸ್ತೆಯಾಗಿ ಬದಲಾಗಿ ಹೋಗಿದೆ. ಹಿಂದೂ, ಇಸ್ಲಾಮ್, ಕ್ರೈಸ್ತವರೆಲ್ಲರೂ ಇಂದೂಮತದಲ್ಲಿನ ಭಾಗಸ್ವಾಮಿಗಳೇ ಆದ್ದರಿಂದ ನಮಸ್ಕಾರವನ್ನು ಯಾರು ಹೇಗೆ ಆಚರಿಸಿದರೂ ಅದು ದೇವರಿಗೋಸ್ಕರ ಇರಬೇಕು. ಈಗ ಹೇಳಿರಿ ನಾನು ನಿಮಗೆ ಮಾಡಿರುವ ನಮಸ್ಕಾರದಲ್ಲಿ ಏನಾದರೂ ತಪ್ಪಿದೆಯೇ?" ಎಂದೆವು.

**ಇಸ್ಲಾಂ ಹಿರಿಯರು :–** "ಈ ವಿಧವಾಗಿ ದೇವರ ಮೇಲೆ ಭಕ್ತಿಯಿಂದ ಗೌರವದಿಂದ ಮಾಡುವುದಾದರೆ ಏನೂ ತಪ್ಪಿಲ್ಲ. ನಿಮ್ಮ ಮಾತುಗಳಲ್ಲಿ ನಮಸ್ಕಾರ ದೇವರಿಗೇ ಎಂಬುವುದು ನಮಗೆ ಸಂತೋಷವೆಯಾಗಲಿ ನೀವು ಹೇಳಿದಂತೆ ಎಲ್ಲರೂ ಹಾಗಲ್ಲದೆ ಕಾಣಿಸಿದ ಆಫೀಸರ್‌ಗೊ, ತನ್ನ ಅವಸರಕ್ಕೆ ಕೆಲಸಕ್ಕೆ ಬರುವವನಿಗೊ, ಅವರ ಸ್ವಾರ್ಥದಿಂದ ಮಾಡುತ್ತಿದ್ದಾರಲ್ಲವೆ! ಅದಕ್ಕೇನನ್ನುತ್ತೀರ" ಅಂದರು.

**ನಮ್ಮ ಮಾತು :–** "ನಾನು ಮೊದಲೆ ಹೇಳಿದ್ದೇನಲ್ಲವೆ ನಮಸ್ಕಾರ ಎಲ್ಲ ವಿಧಗಳಲ್ಲಿಯೂ ಅರ್ಥ ಕೆಟ್ಟಿರುವುದಾಗಿ, ಅದರ ನಿಜಾರ್ಥವು ತಿಳಿಯದೆ ಹೋಗಿರುವುದರಿಂದ ಅದರಲ್ಲಿಯೂ ಸಹ ಸ್ವಾರ್ಥ ತುಂಬಿಹೋಗಿದೆ. ಆದ್ದರಿಂದಲೆ ಯಾವ ಮತಸ್ತನಾದರೂ ದೇವರ ಬಗ್ಗೆ ವಿಧೇಯತೆ ಭಕ್ತಿ ಉಂಟಾದಾಗಲೆ ನಿಜವಾದ ಇಂದೂ ಆಗುವನು. ಹಾಗೆ ಆಗದೆ ಹೋದರೆ ಎಷ್ಟೋ ತಿಳುವಳಿಕೆಯಿಂದ ಮಾನವನಿಗೆ ದೈವಜ್ಞಾನವನ್ನುಂಟುಮಾಡಬೇಕೆಂದು ಇಟ್ಟಿರುವ ಹಿರಿಯರ ಆಚರಣೆಗಳೆಲ್ಲ ವ್ಯರ್ಥವಾಗುತ್ತವೆ. ಇಂದೂ ಸಾಂಪ್ರದಾಯ ವಾದ ನಮಸ್ಕಾರ ಆಚರಣೆಗಳೆಲ್ಲ ವೃಥಾ ಆಗುತ್ತವೆ. ಇಂದೂ ಗಳೆಂದರೆ ಜ್ಞಾನಿಗಳೆಂದು, ಒಂದು ಮತದವರಲ್ಲವೆಂದು, ದೈವ ಮಾರ್ಗದಲ್ಲಿ ಇರುವವರು ಯಾರಾದರೂ ಇಂದೂಗಳೇ ಎಂದು ಮೊದಲಿನಿಂದ ಹೇಳುತ್ತಿದ್ದೇವೆ. ಆದ್ದರಿಂದ ನೀವು ಸಹ ದೇವರ ಮಕ್ಕಳೆ ಆದ್ದರಿಂದ ದೈವಜ್ಞಾನವನ್ನು ಕುರಿತು ಇತರರಿಗೆ ಬೋಧಿಸಿರಿ ಇಂದೂ ಸಾಂಪ್ರದಾಯದ ಪ್ರಕಾರ ಅರ್ಥ ತಿಳಿದು ಇತರರಿಗೆ ನಮಸ್ಕರಿಸಿರಿ, ಇತರರಿಗೆ ಕಾಲು ತಾಕಿದರು ದೈವಕ್ಕೆ ತಾಕಿರುವಂತೆ ಭಾವಿಸಿ ನಮಸ್ಕರಿಸಿರಿ. ಹಾಗೆ ಮಾಡುವುದರಿಂದ ಮಾಯಮಾರ್ಗ ಬಿಟ್ಟು ದೈವಮಾರ್ಗ ವನ್ನು ಅನುಸರಿಸಿದಂತಾಗುತ್ತದೆ. ಕಾಲಕ್ರಮವಾಗಿ ಮಾಸಿಹೋದ ನಮಸ್ಕಾರ ಸಂಪ್ರದಾಯವೆನ್ನುವ ಧರ್ಮವನ್ನು ಉದ್ಧರಿಸಿದಂತಾಗುತ್ತದೆ.



# ಲಾಭ ಸಾಂಪ್ರದಾಯ

ಪ್ರತಿ ಮನುಷ್ಯನಿಗು, ಪ್ರತಿ ಜೀವರಾಶಿಗು ಅರಿಷಡ್ ವರ್ಗಗಳೆಂದು ಹೆಸರೊಂದಿದ ಗುಣಗಳು ಆರು ಇವೆ. ಜೀವಿಗೆ ಶತ್ರುಗಳಂತಹವು ಗುಣಗಳೆಂದು ಅರಿಷಡ್ ಎಂದು ಹೇಳಿದ್ದಾರೆ. ಆರನ್ನು ಒಂದು ಗುಂಪಾಗಿ ಹೇಳುವುದರಿಂದ ಅವುಗಳನ್ನು ವರ್ಗ ಎಂದೂ ಸಹ ಹೇಳಿದ್ದಾರೆ. ಶತ್ರುಗುಣಗಳು ಆರು ಒಂದು ಗುಂಪಾಗಿವೆ ಎಂದಾಗ ಮತ್ತೊಂದು ಗುಂಪು ಸಹ ಇರಬೇಕು. ಆಗಿರುವಾಗಲೇ ವರ್ಗವೆಂಬ ಹೆಸರು ಬರುತ್ತದೆ. ಒಂದು ಗುಂಪಿನ ಗುಣಗಳು ಪಾಪಕ್ಕೆ ಕಾರಣವಾದರೆ, ಮತ್ತೊಂದು ವರ್ಗ ಪುಣ್ಯಕ್ಕೆ ಕಾರಣವಾಗಿವೆ. ಪುಣ್ಯಕ್ಕೆ ಕಾರಣವಾದ ಗುಣಗಳನ್ನು ಯಾರು ಎಲ್ಲಿ ಹೇಳಿಕೊಂಡಿಲ್ಲ. ಆದರೆ ಪಾಪವನ್ನು ಸಂಪಾದಿಸುವ ಗುಣಗಳಾದ ಶತ್ರುವರ್ಗಗಳನ್ನು ಕುರಿತು ಬಹಳ ಹೇಳಿಕೊಳ್ಳುವುದು ನಡೆದಿದೆ. ಅರಿಷಟ್ ವರ್ಗದ ಹೆಸರುಗಳು ಬಹಳ ಜನರಿಗೆ ತಿಳಿದಿದೆ ಆದರೆ ಮಿತ್ರವರ್ಗದ ಹೆಸರುಗಳು ಯಾರಿಗೂ ತಿಳಿದಿಲ್ಲ. ಎಲ್ಲಾದರೆ ಅಪಾಯ ಇರುತ್ತದೋ ಅಲ್ಲಿಯೇ ಎಚ್ಚರಿಕೆಯ ಬೋರ್ಡುಗಳಿರುತ್ತವೆ. ಅಪಾಯಗಳು ಇಲ್ಲದ ಸ್ಥಳದಲ್ಲಿ ಬೋರ್ಡಿನ ಅವಶ್ಯಕತೆ ಇಲ್ಲ. ಹಾಗೆ ಯಾವ ಗುಣಗಳಿಂದ ಮುಪ್ಪು ಇದೆಯೋ ಅವುಗಳನ್ನು ಕುರಿತು ತಿಳಿಸುವ ಬೋರ್ಡಿ ನಂತಹ ಪದ್ಧತಿಗಳು ನಮ್ಮ ಹಿರಿಯರು ನಿರ್ಣಯಿಸಿ ಇಟ್ಟಿದ್ದಾರೆ. ಒಳ್ಳೆಯ ಗುಣಗಳ ಕುರಿತು ಎಲ್ಲೂ ಹೇಳಲಿಲ್ಲ. ಕೆಟ್ಟ ಗುಣಗಳ ಕುರಿತು ತಿಳಿಸುವ ಪದ್ಧತಿಗಳಲ್ಲಿ ನಮಗೆ ತಿಳಿದಿರುವ ಒಂದು ಪದ್ಧತಿಯನ್ನು ವಿವರಿಸಿಕೊಳ್ಳೋಣ.

ಶತ್ರು ಗುಣಗಳನ್ನು ಕುರಿತು ಸಾಂಪ್ರದಾಯ ಪದ್ಧತಿಯಾಗಿ ಇಟ್ಟಿರುವ ಆಚರಣೆ ಪೂರ್ವದಲ್ಲಿ ಎಲ್ಲರಿಗೂ ತಿಳಿದಿರುತ್ತಿತ್ತು. ಯಾವುದಾದರೂ ಧಾನ್ಯವನ್ನು ಅಳೆಯುವಾಗ, ಸಂಖ್ಯೆ ಎಣಿಸುವಾಗ, ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು ಎಂದು ಹೇಳಬೇಕಾಗಿರುವ ಸಂಖ್ಯೆ ಇರುವಾಗ ಹಾಗೆ ಎಂದಿಗೂ ಎಣಿಸುತ್ತಿರಲಿಲ್ಲ. ಸಾಂಪ್ರದಾಯ ಪದ್ಧತಿಯಾಗಿ ಲೆಕ್ಕಿಸುತ್ತಿದ್ದರು ಮೊದಲನೆಯದನ್ನು ಒಂದು ಎಂದು ಪ್ರಾರಂಭ ಮಾಡದೆ ಲಾಭ ಎಂದು ಪ್ರಾರಂಭಿಸುತ್ತಿದ್ದರು. ಲಾಭ ಅಂದ ನಂತರ ಎರಡು, ಮೂರು ಎಂದು

ಆರರವರೆಗೂ ಎಣಿಸಿ ನಂತರ ಏಳು ಎಂದು ಹೇಳದೆ ಆರನ್ನೊಂದು ಎಂದು ಹೇಳುವುದು ಇದೆ. ನಂತರ ಎಂಟು ಎಂದು ಎಣಿಸುವುದು ನಡೆಯುತ್ತಿದೆ. ಈ ಪದ್ಧತಿಯ ಪ್ರಕಾರ ಎಣಿಸುವುದು ಪೂರ್ವಕಾಲದಲ್ಲಿಯೇ ಅಲ್ಲದೆ ಈ ದಿನಗಳಲ್ಲಿಯೂ ಸಹ ನಡೆಯುತ್ತಿದೆ. ಈದಿನ ಅಳತೆ ಮಾಡುವ ಕೆಲವರು ಪೂರ್ವಕಾಲದ ಪದ್ಧತಿ ಪ್ರಕಾರ ಲೆಕ್ಕಮಾಡುತ್ತಿದ್ದರೂ ಪೂರ್ವಕಾಲದಲ್ಲಿ ಇಟ್ಟಿರುವ ಭಾವ ತಿಳಿದಿಲ್ಲ.

ಮನುಷ್ಯರಲ್ಲಿನ ಆರು ಶತ್ರುಗುಣಗಳಲ್ಲಿ ಮೊದಲನೆಯದು ಆಸೆ ಎಂಬ ಗುಣವಿದೆ. ಆಸೆ ಯಾವಾಗಲೂ ಲಾಭವನ್ನೇ ಕೋರುತ್ತಿರುತ್ತದೆ. ಎಲ್ಲದಕ್ಕಿಂತಲೂ ದೊಡ್ಡದು, ಎಲ್ಲದಕ್ಕಿಂತ ಹೆಚ್ಚಾಗಿ ಮನುಷ್ಯನನ್ನು ಪೀಡಿಸುವುದು ಆಸೆ ಎಂಬ ಗುಣವು. ಆದ್ದರಿಂದ ಅದು ಎಲ್ಲರಿಗೂ ತಿಳಿಯುವಂತೆ ಎಣಿಸಿಕೊಳ್ಳುವಾಗ ಸಂಖ್ಯೆಯಲ್ಲಿ ಮೊದಲನೆಯದಾದ ಕಾಮಗುಣವನ್ನು ಲಾಭ ಎಂದು ಪೂರ್ವದಲ್ಲಿ ಒಂದಕ್ಕೆ ಬದುಲು ಹೇಳುತ್ತಿದ್ದರು. ಕಾಮದಿಂದ ಮೊದಲಾಗಿ ಅಸೂಯೆದಿಂದ ಅಂತ್ಯವಾಗುವ ಗುಣಗಳ ಗುಂಪನ್ನು ಪ್ರತ್ಯೇಕವಾಗಿ ಗುರುತಿಸುವಂತೆ, ಕೆಟ್ಟಗುಣಗಳು ಆರೇ ಇವೆ ಎಂದು ತಿಳಿಯುವಂತೆ ಆರು ನಂತರ ಏಳು ಎಂದು ಹೇಳದೆ ಆರನ್ನೊಂದು ಎನ್ನುತ್ತಿದ್ದರು. ಈ ವಿಧವಾಗಿ ಶತ್ರು ಗುಂಪಿನಲ್ಲಿನ ಗುಣಗಳ ಸಂಖ್ಯೆ ಇಷ್ಟೇ ಎಂದು ತಿಳಿಯುವಂತೆ, ಮತ್ತು ಅದರಲ್ಲಿನ ಮೊದಲ ಗುಣದ ಮತ್ತೊಂದು ಹೆಸರು ಲಾಭ ಎಂದು ತಿಳಿಯುವಂತೆ, ಮೊದಲು ಲಾಭವೆಂದು ವರಸೆ ಕ್ರಮದಲ್ಲಿ ಆರು ಹತ್ತಿರವೇ ನಿಲ್ಲಿಸಿ ಎರಡು ಬಾರಿ ಆರನ್ನು ಹೇಳುತ್ತಿದ್ದರು. ವರಸೆ ಕ್ರಮದಲ್ಲಿ ಆರು ಎಂದು ಹೇಳಿ ನಂತರವೂ ಸಹ ಆರು ಒಂದು ಎಂದು ಹೇಳುವುದರಿಂದ ಆರನ್ನು ಎರಡು ಬಾರಿ ಉಚ್ಚರಿಸಿದಂತಾಗಿದೆ. ಹಾಗೆ ಹೇಳುವುದರಿಂದ ಮೊದಲನೆಯದಾದ ಆಸೆಯನ್ನು ಕುರಿತು ಕೊನೆಯದಾದ ಅಸೂಯೆಯನ್ನು ಕುರಿತು ಜ್ಞಾಪಕ ಮಾಡಿದಂತಾಗುತ್ತಿತ್ತು. ಮನುಷ್ಯನಿಗೆ ಎಲ್ಲ ಗುಣಗಳಿಗಿಂತಲೂ ಹೆಚ್ಚಾಗಿ ಬಾಧಿಸುವವು ಎರಡು ಗುಣಗಳು ಮಾತ್ರವೆ ಇವೆ. ಅವು ಒಂದು ಮೊದಲನೆಯದಾದ ಆಸೆ ಗುಣದ ನಂತರ ಆರನೆಯದಾದ

ಅಸೂಯೆ ಗುಣ. ಈ ಎರಡು ಗುಣಗಳನ್ನು ಕುರಿತು ಎಲ್ಲರಿಗೂ ತಿಳಿಯಬೇಕಾದ ಅಗತ್ಯವಿದೆ. ಆದ್ದರಿಂದ ಸಂಖ್ಯೆಯನ್ನು ಎಣಿಸುವಾಗ ಲಾಭ ಎಂದು ಆರಂಭ ಮಾಡಿ ಆರು ನಂತರ ಆರನ್ನೊಂದು ಎಂದು ಹೇಳುವುದಿದೆ. ಪೂರ್ವದಲ್ಲಿ ಹಿರಿಯರು ಹೇಳಿದ ಸಾಂಪ್ರದಾಯಗಳಲ್ಲಿ ಆಧ್ಯಾತ್ಮಿಕತೆ ತುಂಬಿ ತುಳುಕುತ್ತಿತ್ತು. ಈದಿನ ಆಚರಣೆಗಳಿದ್ದರೂ ಅರ್ಥಗಳು ತಿಳಿಯದೆ ಹೋಗುವುದರಿಂದ ಸಾಂಪ್ರದಾಯಗಳಿಗೆ ಬೆಲೆ ಇಲ್ಲದೆ ಹೋಗಿದೆ. ಈಗಿನಿಂದ ನಾವು ಪೂರ್ವಕಾಲದ ಸಾಂಪ್ರದಾಯದ ಪ್ರಕಾರ ಕೆಟ್ಟಗುಣಗಳು ತಿಳಿಯುವಂತೆ ಮೊದಲು ಲಾಭ ಎಂದು ಸಂಖ್ಯೆಯನ್ನು ಎಣಿಸುವಾಗ ಹೇಳಿ ಇದು ನಮ್ಮಲ್ಲಿನ ಮೊದಲ ಗುಣವೆಂದು ಇತರರಿಗೆ ತಿಳಿಸಬೇಕೆಂದು ಕೋರುತ್ತಿದ್ದೇವೆ.



# ಕಟ್ಟು ಬೊಟ್ಟಿನ ಆಚರಣೆ

ಇಂದೂ ಮತದಿಂದ ಸೀಳಿ ಹೋಗಿರುವ ಹಿಂದೂ, ಕ್ರಿಷ್ಟಿಯನ್, ಇಸ್ಲಾಂ ಮೊದಲಾದ ಮತಗಳಿವೆ. ಸುಮಾರು ಏಳು ಕೋಟಿ ವರ್ಷಗಳ ಪೂರ್ವದಿಂದ ಇಂದೂ ಮತ ಇದೆ. ಈಗಲೂ ಇಂದೂ ಮತವಿದ್ದರೂ ಬದಲಾಗಿಹೋಗಿರುವ ಹೆಸರುಗಳನ್ನು ಹೊಂದಿದೆ. ಇಂದೂ ಮತದಿಂದ ಸೀಳಿ ಹೋಗಿರುವ ಮತಗಳೆಲ್ಲವುಗಳಲ್ಲಿಯೂ ಇಂದೂತ್ವವಿದೆ. ಆದರೆ ಮತಗಳ ಹುಚ್ಚು ಹಿಡಿದಿರುವ ಮನುಷ್ಯರು ಬೇರೆಬೇರೆ ಮತಗಳ ಹೆಸರುಗಳು ಇಟ್ಟುಕೊಂಡು ಆಯಾ ಮತದವರೆಂದು ವಾದಿಸುತ್ತಿದ್ದಾರೇ ಹೊರತು ನಮ್ಮ ಮತದಲ್ಲಿ ದೈವ ಜ್ಞಾನವಿದೆ ಎಂದು ಆದ್ದರಿಂದಲೇ ತಮ್ಮದು ಇಂದೂ ಮತವೆಂದು ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ಕೊನೆಗೆ ಇಂದೂಗಳು ಸಹ ತಾವು ಮೊದಲು ಇಂದೂಗಳೇ ಎಂದು ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ಈ ದಿನ ಭೂಮಿಯ ಮೇಲೆ ಎಷ್ಟು ಮತಗಳಿವೆಯೋ ಅವುಗಳಿಗೆಲ್ಲಾ ಮೂಲಸ್ಥಾನ ಇಂದೂ ಮತ. ಹೊಸ ಹೆಸರು ಇಟ್ಟುಕೊಂಡ ಮಾತ್ರಕ್ಕೆ ಅವರು ಬೇರೆ ಅಲ್ಲ. ದೇವರ ಜ್ಞಾನವನ್ನು ಬೋಧಿಸುವ

ಯಾವ ಮತವಾದರೂ ಇಂದೂ ಮತವೇ. ಇಂದೂ ಎಂದರೆ ದೇವರ ಜ್ಞಾನವೆಂದು ಅರ್ಥ. ಆ ಲೆಕ್ಕ ಪ್ರಕಾರ ಎಲ್ಲಾ ಮತಗಳೂ ವ್ಯತ್ಯಾಸವಿಲ್ಲದೆ ಇಂದೂಮತದಲ್ಲಿನ ಭಾಗಗಳೆಂದೆ ಹೇಳಬಹುದು. ಪ್ರಪಂಚಕ್ಕೆಲ್ಲ ದೇವರೊಬ್ಬನೇ ಇದ್ದಾನೆ. ಹಾಗೆ ಪ್ರಪಂಚಕ್ಕೆಲ್ಲಾ ಇಂದೂಮತ ಒಂದೇ ಇದೆ. ಇರುವ ಒಬ್ಬ ದೇವರನ್ನು ಅನೇಕ ಮತಗಳವರು ಅನೇಕ ವಿಧಗಳಾಗಿ ಕರೆದುಕೊಳ್ಳುತ್ತಿದ್ದಾರೆ. ಹಾಗೆ ತಮ್ಮವು ಬೇರೆ ಮತಗಳೆಂದು ಭ್ರಮಿಸುತ್ತಿದ್ದಾರೆ. ಕೊನೆಗೆ ಎಲ್ಲರ ಗಮ್ಯ ಒಬ್ಬ ದೇವರೇ. ಏಳುಕೋಟಿ ವರ್ಷಗಳಿಂದ ಇಂದೂ ಮತ ಅನೇಕ ಮತಗಳಾಗಿ ರೂಪಾಂತರಹೊಂದುತ್ತಾ ಬಂದು ಪ್ರಸ್ತುತ ಕಾಲಕ್ಕೆ 2000 ವರ್ಷಗಳ ಪೂರ್ವದಿಂದ ಕ್ರೈಸ್ತ ಮತವಾಗಿ, 1400 ವರ್ಷಗಳ ಪೂರ್ವಕಾಲದಿಂದ ಇಸ್ಲಾಂ ಮತಗಳಾಗಿ, ಇನ್ನೂ ಅನೇಕ ಮತರೂಪಗಳಲ್ಲಿ ನಿಂತಿದೆ. ಬದಲಾವಣೆ ಹೊಂದುತ್ತಾ ಹೋಗಿ ಉಳಿದ ಇಂದೂ ಮತ ಸ್ವಲ್ಪ ತನ್ನ ಹೆಸರು ಕಳೆದುಕೊಂಡು ಹಿಂದೂಮತವಾಗಿ ಬದಲಾಗಿಹೋಗಿದೆ. ಯಾವುದು ಏನಾದರೂ ಎಲ್ಲ ಮತಗಳ ಸಾರಾಂಶಗಳಲ್ಲಿ ಇಂದೂತ್ವ ನಿಗೂಢವಾಗಿದ್ದರೂ ಅದನ್ನು ಗ್ರಹಿಸಲಾರದ ಮನುಷ್ಯರು ನಾನು ಹಿಂದುವೆಂದು ನನ್ನ ಮತ ಬೇರೆಯೆಂದು, ನಮ್ಮ ದೇವರು ಬೇರೆಯೆಂದು ಅಂದುಕೊಳ್ಳುತ್ತಿರುವಾಗ, ಹಾಗೆಯೇ ಕೆಲವರು ನಾವು ಇಸ್ಲಾಂ ಮತಸ್ಥರೆಂದು ನಮ್ಮ ದೇವರು ಬೇರೆ ಎಂದು ಅಂದುಕೊಳ್ಳುತ್ತಿದ್ದಾರೆ. ಮತ್ತೆ ಕೆಲವರು ನಾವು ಕ್ರೈಸ್ತವರೆಂದು ನಮ್ಮ ಮತ ನಮ್ಮ ದೇವರು ಬೇರೆ ಎಂದು ಹೇಳಿಕೊಳ್ಳುತ್ತಿದ್ದಾರೆ. ಅಷ್ಟೇ ಅಲ್ಲದೆ ನಾವು ಬೇರೆ ಎಂದು ತಿಳಿಯುವುದಕ್ಕೆ, ನಾವು ಇಂತಹ ಮತಸ್ಥರೆಂದು ಇತರರು ತಿಳಿಯುವುದಕ್ಕೆ, ಅವರವರ ಜೀವನ ಶೈಲಿಯಲ್ಲಿ ಬದಲಾವಣೆಗಳು ಮಾಡಿಕೊಳ್ಳುವುದಲ್ಲದೆ ಆಕಾರ ಅಲಂಕಾರ ಗಳಲ್ಲಿಯೂ ಬದಲಾವಣೆಗಳು ಮಾಡಿಕೊಂಡಿದ್ದಾರೆ.

ನಾವು ಇಂತಹ ಮತದವರೆಂದು ಗುರುತಿಸುವಂತೆ ಮುಸ್ಲಿಮರು, ಹಿಂದುಗಳು, ಕ್ರೈಸ್ತವರಿರುವುದು ಎಲ್ಲರಿಗೂ ತಿಳಿದಿರುವ ವಿಷಯವೆ. ಗುರು ತಿಸುವುದಕ್ಕೆ ತಮ್ಮ ಆಕಾರಗಳೆಂದು ಅವರು ಸಹ ಹೇಳುತ್ತಿದ್ದಾರೆ. ಪೂರ್ವದಲ್ಲಿ

ಎಲ್ಲ ಮತಗಳಿಗೂ ಆಧಾರವಾದ ಇಂದೂ ಮತದಲ್ಲಿಯೂ ಸಹ ಕೆಲವು ಕಟ್ಟು ಬೊಟ್ಟು ಅಲಂಕರಣಗಳಿದ್ದವು. ಇಂದೂ ಮತದಲ್ಲಿ ಯಾವ ಆಚರಣೆಗಳು ಇದ್ದರೂ ಅದು ದೈವಜ್ಞಾನ ಸಂಬಂಧವಾಗಿರುತ್ತದೆ, ಆದ್ದರಿಂದ ಅವುಗಳಿಗೆಲ್ಲ ಅರ್ಥವಿರುತ್ತಿತ್ತು. ಅರ್ಥವಿರುವ ಆಚರಣೆಗಳು ಇರುವ ಇಂದೂ ಮತ ಸ್ವಲ್ಪ ಬದಲಾಗಿಹೋಗಿ ಹಿಂದೂಮತವಾಗಿ ಬದಲಾದರೂ ಹಳೆಯ ಆಚರಣೆಗಳು ಸ್ವಲ್ಪ ಕಾಲ ಇರುತ್ತಿದ್ದವು. ನಂತರ ಎಲ್ಲ ಬದಲಾವಣೆ ಹೊಂದಿವೆ, ಮನುಷ್ಯರೂ ಸಹ ಇಂದೂಗಳಿಂದ ಪೂರ್ತಿ ಹಿಂದೂಗಳಾಗಿ ಬದಲಾಗಿದ್ದಾರೆ. ಪೂರ್ವದಲ್ಲಿದ್ದ ಇಂದೂ ಸಾಂಪ್ರದಾಯಗಳಲ್ಲಿನ ಅರ್ಥವಿರುವ ಕಟ್ಟು ಬೊಟ್ಟಿನ ಅಲಂಕಾರದ ವಿಷಯಗಳನ್ನು ಕುರಿತು ತಿಳಿದುಕೊಳ್ಳೋಣ.



## ತಲೆಮುಡಿ

ಪೂರ್ವದಲ್ಲಿ ಸ್ತ್ರೀಯರು ಪುರುಷರು ಎಲ್ಲರೂ ತಲೆಯ ಮೇಲೆ ಕೂದಲುಗಳನ್ನು ಬೆಳೆಸುತ್ತಿದ್ದರು. ಬೆಳೆಸಿದ ಕೂದಲನ್ನು ತಲೆಯ ಮಧ್ಯ ಭಾಗದಲ್ಲಿ ಮುಡಿ ಹಾಕುತ್ತಿದ್ದರು. ಮನಸ್ಸಿನ ಒಂದು ಆಲೋಚನೆಗಳಿಗೆ ಶಿರಸ್ಸು ಸ್ಥಾನ. ತಲೆಯಲ್ಲಿನ ಯೋಚನೆಗಳ ವಿಕಾರಗಳು ಲೆಕ್ಕವಿಲ್ಲದಷ್ಟು ಇವೆ. ಆದ್ದರಿಂದ ಯೋಚನೆಗಳನ್ನು ತಲೆಕೂದಲುಗಳ ಸಂಖ್ಯೆಯಾಗಿ ತಿಳಿದು ಅವುಗಳನ್ನು ಮುಡಿಹಾಕುವುದು ನಡೆದಿದೆ. ತಲೆ ಮಧ್ಯಭಾಗದಲ್ಲಿ ಬ್ರಹ್ಮನಾಡಿ ಇದೆ. ತಲೆ ಮೇಲೆ ಇದರ ಸ್ಥಾನವನ್ನು **"ನೆತ್ತಿ"** ಎನ್ನುತ್ತಾರೆ. ನಮ್ಮಲ್ಲಿನ ಭಾವನೆಗಳನ್ನು ಇಷ್ಟಾನುಸಾರ ಹೋಗದಂತೆ ಬಂಧಿಸುವುದರಿಂದ ಮನೋನಿಲುಗಡೆ ಹೊಂದಿ ಆತ್ಮ ತಿಳಿಯುತ್ತದೆ. ಯೋಚನೆಗಳು ಉದ್ರೇಕಗೊಳ್ಳುತ್ತಿರುವವರೆಗೂ ಶರೀರ ದೊಳಗಿನ ಆತ್ಮ ತಿಳಿಯುವುದಿಲ್ಲ. ಅನೇಕ ಯೋಚನೆಗಳನ್ನು ಕೂದಲ ಸಂಖ್ಯೆಗಳೊಂದಿಗೆ ಹೋಲಿಸಿ ಯೋಚನೆಗಳನ್ನು ಉದ್ರೇಕಗೊಳ್ಳದಂತೆ ಮಾಡುವ ಅರ್ಥ ಬರುವಂತೆ ಕೂದಲುಗಳನ್ನು ಮುಡಿಹಾಕುತ್ತಿದ್ದರು. ಯೋಚನೆಗಳು

ನಿಲ್ಲುವುದರಿಂದ ತಲೆ ಮಧ್ಯದಲ್ಲಿನ ಆತ್ಮ ತಿಳಿಯುತ್ತದೆ, ಆದ್ದರಿಂದ ಕೂದಲನ್ನು ಸಹ ತಲೆ ಮಧ್ಯಭಾಗದಲ್ಲಿ ಮುಡಿಹಾಕುತ್ತಿದ್ದರು. ಪೂರ್ವಕಾಲದಲ್ಲಿ ಸ್ತ್ರೀಯರು ಪುರುಷರು ಎಲ್ಲರೂ ತಲೆಯ ಮೇಲೆ ಕೂದಲನ್ನು ಕುಪ್ಪೆಯಾಗಿ ಕಟ್ಟುತ್ತಿದ್ದರು. ಕೂದಲುಗಳ **"ಕುಪ್ಪೆ"** ಎಂಬ ಪದವು ಕಾಲಕ್ರಮದಲ್ಲಿ ಸ್ವಲ್ಪ ಬದಲಾಗಿ **"ಕೊಪ್ಪೆ"** ಆಗಿದೆ. ಜ್ಞಾನಾರ್ಥದಿಂದಿರುವ ಕೊಪ್ಪೆ ಪೂರ್ವದಲ್ಲಿ ಪುರುಷರಿಗೆ ಸ್ತ್ರೀಯರಿಗೆ ಇರುತ್ತಿತ್ತು. ತಲೆ ಮಧ್ಯಸ್ಥಾನವು ಆತ್ಮಸ್ಥಾನವೆಂದು, ಆ ಸ್ಥಾನಕ್ಕೆ ಪೂಜ್ಯ ಭಾವನೆಯಿಂದ ಸುವಾಸನೆ ಇರುವ ಬಿಳಿಯ ಮಲ್ಲಿಗೆ ಹೂಗಳನ್ನು ಇಡುತ್ತಿದ್ದರು. ಪೂರ್ವಕಾಲದಲ್ಲಿ ಸ್ತ್ರೀಯರು ಪುರುಷರೆಲ್ಲರೂ ತಮ್ಮ ತಮ್ಮ ಕೊಪ್ಪೆಗಳ ಮೇಲೆ ಹೂಗಳನ್ನು ಮುಡಿಯುತ್ತಿದ್ದರು. ಪುರುಷರು ಹೂಗಳನ್ನು ಮುಡಿಯುತ್ತಿದ್ದರೆಂದರೆ ವಿಚಿತ್ರವಾಗಿದೆ ಅಲ್ಲವೆ! ಜ್ಞಾನ ಚಿಹ್ನೆಯಾದ ಚಂದ್ರನ ಬಿಂಬವು ಬಿಳಿಯದು. ಹಾಗೆಯೇ ಬೆಳ್ಳಗಿರುವ ಮಲ್ಲಿಗೆ ಹೂಗಳು ಸಹ ಜ್ಞಾನಾರ್ಥ ಕೊಡುವವೇ, ತಮ್ಮ ತಲೆಗಳಲ್ಲಿ ಸ್ವಚ್ಚವಾದ ಜ್ಞಾನ ಉಂಟಾಗಬೇಕೆಂದು ಪೂಜ್ಯ ಭಾವನೆಯಿಂದ ಸ್ವಚ್ಚತೆಗೆ ಮತ್ತೊಂದು ಹೆಸರಾದ ಬಿಳಿಬಣ್ಣದ ಮಲ್ಲಿಗೆ ಹೂಗಳನ್ನೇ ಧರಿಸುತ್ತಿದ್ದರು. ಈ ವಿಧವಾಗಿ ಪೂರ್ವಕಾಲದ ಇಂದೂಗಳು ಎಷ್ಟೋ ಭಾವನೆಯಿಂದ ಕೂಡಿಕೊಂಡಿರುವ ತಲೆಯ ಮುಡಿಯನ್ನು ತಲೆಯ ಮಧ್ಯಭಾಗದಲ್ಲಿ ಇರಿಸಿಕೊಳ್ಳುತ್ತಿದ್ದರು.

ಇಂದಿನ ಕಾಲದಲ್ಲಿ ಪುರುಷರಲ್ಲಿ ತಲೆ ಮೇಲಿನ ಕೊಪ್ಪೆ ಮಾಯವಾಗಿದೆ. ಸ್ತ್ರೀಯರಲ್ಲಿಯೂ ಸಹ ಕ್ರಾಪುಗಳು, ಜಡೆಗಳು ಬಂದು ಕೊಪ್ಪೆ ಕಟ್ಟುವವರೇ ಇಲ್ಲದಂತಾಗಿದ್ದಾರೆ. ಎಲ್ಲಿಯಾದರೂ ಯಾರಾದರೂ ಕೊಪ್ಪೆ ಕಟ್ಟುವವರಿದ್ದಾರೆಂದರೆ ಆ ಕೊಪ್ಪೆ ತಲೆ ಮೇಲಿರದೆ ತಲೆಯ ಹಿಂದೆ ಇರುತ್ತದೆ. ಸ್ತ್ರೀಯರು ಎಲ್ಲರೂ ಹೂವುಗಳನ್ನು ಇಟ್ಟುಕೊಳ್ಳುವುದು ಇಂದಿಗೂ ಇದ್ದರೂ ಅವು ದೇವರಿಗೆ ಅಲ್ಲ. ಮುಡಿಯುವ ಹೂಗಳು ಸಹ ಅಲಂಕಾರಕ್ಕಾಗಿ ಆಕರ್ಷಣೆಗಾಗಿ ಮಾತ್ರವೇ ಮುಡಿಯುತ್ತಿದ್ದಾರೆ. ಪೂರ್ವದಲ್ಲಿ ಎಷ್ಟೋ ಜ್ಞಾನದಿಂದ ಕೂಡಿ ಕೊಂಡಿರುವ ಆಚರಣೆ ಸಾಂಪ್ರದಾಯವು ಈದಿನ ಅರ್ಥಹೀನವಾಗಿ ಹೋಗಿದೆ. ಕೊಪ್ಪೆಕಟ್ಟಿ

ಹೂವುಗಳು ಮುಡಿಯುವುದು ಜ್ಞಾನ ಸಾಂಪ್ರದಾಯವೆಂಬ ಮಾತೇ ತಿಳಿಯದಂತೆ ಹೋಗಿದೆ. ಇಲ್ಲಿಗೆ ನೂರು ವರ್ಷಗಳ ಕೆಳಗೂ ಸಹ ಪುರುಷರಿಗೆ ಕೊಪ್ಪೆಗಳಿರುತ್ತಿದ್ದವು. ಪಂಜಾಬ್ ರಾಷ್ಟ್ರದಲ್ಲಿ ಸಿಕ್ಕರು ಈಗಲೂ ತಲೆ ಮೇಲೆ ಕೂದಲನ್ನು ಮುಡಿಹಾಕುವುದನ್ನು ನೋಡಿದರೆ ಪೂರ್ವದ ಸಾಂಪ್ರದಾಯ ಅಲ್ಲಲ್ಲಿ ಮಾತ್ರವೆ ಉಳಿದುಕೊಂಡಿದೆ ಎಂದು ತಿಳಿಯುತ್ತದೆ. ಅಲ್ಲಿಯೂ ಸಹ ಪುರುಷರು ಹೂವು ಇಡುವ ಸಾಂಪ್ರದಾಯವಿಲ್ಲ.

ಈಗಲಾದರೂ ಜ್ಞಾನ ತಿಳಿದು ಸಾಂಪ್ರದಾಯದ ಪ್ರಕಾರ ಪುರುಷರು ಕೊಪ್ಪೆಕಟ್ಟಿ ಹೂವುಗಳು ಇಟ್ಟುಕೊಳ್ಳಬಹುದು. ಆದರೆ ಉಳಿದವರಿಗೆ ಸಾಂಪ್ರ ದಾಯದ ಬೆಲೆ ತಿಳಿದಿಲ್ಲ ಆದ್ದರಿಂದ ಹೂವು ಮುಡಿದುಕೊಂಡವನನ್ನು ನಪುಂಸಕನೆಂದು ಅಂದುಕೊಳ್ಳುವ ಅಪಾಯವಿದೆ. ಆದ್ದರಿಂದ ಮೊದಲು ಇಂದೂ ಸಾಂಪ್ರದಾಯಗಳನ್ನು ಕುರಿತು ಪ್ರಜೆಗಳಿಗೆ ತಿಳಿಸಬೇಕಾದ ಜವಾಬ್ದಾರಿ ಎಷ್ಟಾದರೂ ಇದೆ. ಎಲ್ಲರಿಗೂ ತಿಳಿದಾಗ ಆಚರಣೆಗೆ ಅರ್ಥ ಏರ್ಪಡುತ್ತದೆ. ಇಲ್ಲದಿದ್ದರೆ ಅನರ್ಥ ಮಾಡಿಕೊಳ್ಳುವ ಮುಪ್ಪು ಇದೆ. ಇಂದೂ ಸಂಪ್ರದಾಯಗಳಲ್ಲಿ ತಲೆ ಮೇಲೆ ಮುಡಿ ಹಾಕುವುದನ್ನು ಸ್ತ್ರೀಯರಾದರೂ ಮುಖ್ಯವಾದ ಕೆಲಸವಾಗಿ ಇಟ್ಟುಕೊಳ್ಳಬೇಕೆಂದು ಕೋರುತ್ತಿದ್ದೇವೆ. ಹಾಗೆ ಆಗದಿದ್ದಲ್ಲಿ ಮುಡಿ ಸಾಂಪ್ರದಾಯ ನಮ್ಮ ತಳಪಾಯದಿಂದಲೇ ಅಂತ್ಯವಾಗಿ ಹೋಗುತ್ತದೆ.



# ತಲೆ ಬೋಳು ಮಾಡಿಸಿಕೊಳ್ಳುವುದು

ಪೂರ್ವಕಾಲದಲ್ಲಿ ನಾಯಿ ಬ್ರಾಹ್ಮಣರೆಂಬುವವರು(ಕ್ಷೌರಿಕರು) ಗುಡಿ ಹತ್ತಿರ ಮಂಗಳವಾದ್ಯಗಳು ನುಡಿಸಲು ಇರುತ್ತಿದ್ದರು. ಹಾಗೆಯೇ ಯಾರಾದರೂ ಭಕ್ತರು ತಲೆ ಬೋಳು ಮಾಡಿಸಿಕೊಳ್ಳುವ ಹರಕೆ ಇದ್ದರೆ ಆ ಹರಕೆಯನ್ನು ಸಲ್ಲಿಸಲು ತಲೆ ಕೂದಲನ್ನು ತೆಗೆದು ಬೋಳು ಮಾಡುತ್ತಿದ್ದರು. ಮಂಗಳ ಕತ್ತಿಯನ್ನು ಗುಂಡು ಮಾಡುವಸಲುವಾಗಿ ಬಳಸುತ್ತಿದ್ದರು. ದೈವ ಸೇವೆಯ

ನಿಮಿತ್ತ ಬ್ರಾಹ್ಮಣರು, ನಾಯಿಬ್ರಾಹ್ಮಣರು ದೇವಾಲಯಗಳ ಬಳಿ ಕಾಣಿಸಿ ಕೊಳ್ಳುತ್ತಿದ್ದರು. ಗರ್ಭಗುಡಿಯೊಳಗಿನ ಕೆಲಸ ಬ್ರಾಹ್ಮಣರಿಗೆ, ಗರ್ಭಗುಡಿಯ ಹೊರಗಿನ ಕೆಲಸ ನಾಯಿಬ್ರಾಹ್ಮಣರಿಗೆ ಇರುತ್ತಿತ್ತು. ಬ್ರಾಹ್ಮಣರು ನಾಯಿಬ್ರಾಹ್ಮಣರು ಒಂದೇ ತಂದೆಗೆ ಹುಟ್ಟಿದವರಾದರೂ ತಾಯಂದಿರು ಬೇರೆ ಬೇರೆ. ಆದ್ದರಿಂದ ಗುಡಿಯಲ್ಲಿನ ಕೆಲಸವನ್ನು, ಮದುವೆ ಹತ್ತಿರದ ಕೆಲಸವನ್ನು, ಮರಣಿಸಿದವನ ಕರ್ಮಕಾಂಡದ ಕೆಲಸವನ್ನು ಇಬ್ಬರೂ ಹಂಚಿಕೊಂಡು ಮಾಡುತ್ತಿರುದ್ದರು. ನಾಯಿ ಎಂದರೆ ಕುಕ್ಕ ಎಂದು ಬಹಳ ಭಾಷೆಗಳಲ್ಲಿ ಅರ್ಥ ಇದೆ. ತಿಳಿವಳಿಕೆಯುಳ್ಳ ಬ್ರಾಹ್ಮಣರು ತಮ್ಮ ಸವತಿ ತಾಯಿ ಮಕ್ಕಳಿಗೆ ನಾಯಿ ಬ್ರಾಹ್ಮಣರೆಂದು ಹೆಸರು ಇಟ್ಟಿದ್ದಾರೆ. ತಮ್ಮ ಸೋದರರು ತಮ್ಮನ್ನು ಕಡಿಮೆ ಮಾಡುವುದಕ್ಕೆ ಇಟ್ಟಿರುವ ಹೆಸರೆಂದು ತಿಳಿಯದೆ ಮಂಗಳರು (ಕ್ಷೌರಿಕರು) ಈಗಲೂ ನಾವು ನಾಯಿಬ್ರಾಹ್ಮಣ ರೆಂದು ಹೇಳಿಕೊಳ್ಳುವುದನ್ನು ನೋಡಿಯೇ ಇದ್ದೇವೆ. ಮಂಗಳ ಎಂದರೆ ಶುಭವೆಂದು, ಮಂಗಳದವ (ಕ್ಷೌರಿಕ) ರೆಂದರೆ ಶುಭಕರವಾದವರೆಂದು ಅರ್ಥ ವಿರುವಾಗ ಮಂಗಳದವರು ಎಂದರೆ ಏನೋ ಕಡಿಮೆಯಾದಂತೆ, ನಾಯಿ ಬ್ರಾಹ್ಮಣರೆಂದರೆ ಏನೋ ದೊಡ್ಡವರೆನ್ನುವಂತೆ ಹೇಳಿಕೊಳ್ಳುವುದು, ನಾಯಿಬ್ರಾಹ್ಮಣ ರೆಂದು ಬೋರ್ಡುಗಳು ಇಟ್ಟುಕೊಂಡಿರುವುದನ್ನು ನೋಡಿದರೆ ವಿಚಿತ್ರವಾಗಿರುತ್ತದೆ ಅಲ್ಲವೆ!.

ಪೂರ್ವಕಾಲದಲ್ಲಿ ಶ್ರೀರಂಗನ ದೇವಾಲಕ್ಕೆ ಒಬ್ಬ ಜ್ಞಾನಿ ಹೋಗಿ, ಅಲ್ಲಿ ಜ್ಞಾನದ ಪ್ರಕಾರ ತನ್ನ ಉದ್ದೇಶವನ್ನು ತಿಳಿಸುವುದಕ್ಕೆ ನಾನು ಆಲೋಚನೆಗಳೆಲ್ಲ ವನ್ನು ಇಲ್ಲದಂತೆ ಮಾಡಿಕೊಂಡಿದ್ದೇನೆಂದು, ತಲೆ ಮೇಲೆ ಆಲೋಚನೆಗಳ ಸಂಖ್ಯೆಗೆ ಗುರುತಾದ ಕೂದಲುಗಳನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿ ಕೊಂಡು, ಕೂದಲುಗಳು ಇಲ್ಲದ ಗುಂಡನ್ನು ಪ್ರತಿಮೆ ಮುಂದೆ ತೋರಿ ಸಬೇಕೆಂದುಕೊಂಡಿದ್ದಾನೆ. ಅದು ಒಂದು ಶುಭಕರವಾದ, ಮಂಗಳಕರವಾದ ಕೆಲಸ ಆದ್ದರಿಂದ ಪವಿತ್ರವಾದ ಬ್ರಾಹ್ಮಣರಿಂದ ಆ ಕೆಲಸವನ್ನು ಮಾಡಿಸಿಕೊಳ್ಳಬೇ ಕೆಂದು ಗುಡಿ ಹೊರಗಿನ ಕೆಲಸಗಳನ್ನು ಹಂಚಿಕೊಂಡ ಬ್ರಾಹ್ಮಣರನ್ನು ನೋಡಿ

ತನ್ನ ಉದ್ದೇಶವನ್ನು ತಿಳಿಸಿದನು. ದೇವಾಲಯದ ಹತ್ತಿರ ದೇವರ ಸೇವೆ ಮಾಡುವ ಹೊರ ಬ್ರಾಹ್ಮಣರು ಆ ಕೆಲಸಕ್ಕೆ ಒಪ್ಪಿಕೊಂಡು ಒಂದು ಹರಿತವಾದ ಕತ್ತಿಯಿಂದ ತಲೆಯ ಮೇಲಿರುವ ಕೂದಲುಗಳನ್ನೆಲ್ಲ ತೆಗೆದುಹಾಕಿದರು. ಮೊದಲು ಹೀಗೆಯೇ ದೇವಾಲಯದಲ್ಲಿ ಪ್ರಾರಂಭವಾದ ಕೂದಲು ಬೋಳಿಸುವ ಕೆಲಸ ಈಗ ಬಜಾರುಗಳಲ್ಲಿ ಷಾಪುಗಳಿಗೆ ಬದಲಾಗಿದೆ. ದೈವ ಸೇವೆಯ ರೂಪದಲ್ಲಿ ಪ್ರಾರಂಭವಾದ ಕೆಲಸ ಈದಿನ ಅವರಿಗೆ ಜೀವನಾಧಾರವಾಗಿದೆ. ಯೋಗಸಂಪನ್ನನಾದ ಜ್ಞಾನಿ ತನ್ನ ಜ್ಞಾನವನ್ನು ಸಾಂಪ್ರದಾಯ ಪದ್ಧತಿಯಾಗಿ, ಆಚರಣೆ ಪದ್ಧತಿಯಾಗಿ ತಿಳಿಸುವುದಕ್ಕೆ ತಲೆ ಮೇಲಿನ ಕೂದಲುಗಳೆಲ್ಲವನ್ನು ತೆಗೆದುಹಾಕಿಸಿದನು. ಆತ್ಮಜ್ಞಾನ ತಿಳಿಸುವ ಶುಭಕರವಾದ ಆ ಕೆಲಸವನ್ನು ಮಾಡಿರುವುದಕ್ಕೆ ತಲೆಗೂದಲು ಬೋಳಿಸಿದ ಬ್ರಾಹ್ಮಣರನ್ನು ಮಂಗಳ ಮಾಡಿದವರು ಆದ್ದರಿಂದ ಮಂಗಳರೆಂದು ಕೊಟ್ಟಿರುವ ಬಿರುದು ಇಂದಿಗೂ ಇದ್ದರು ಅದೇನೋ ಕೆಟ್ಟದಾಗಿ, ನಾಯಿಬ್ರಾಹ್ಮಣರೆನ್ನುವುದು ಏನೋ ದೊಡ್ಡದಾಗಿ ತಿಳಿಯುತ್ತಿದ್ದಾರೆ.

ಆದಿನ ಹಾಗೆ ಪ್ರಾರಂಭವಾದ ತಲೆಗೂದಲು ಬೋಳಿಸಿ ತೋರಿಸುವ ಸಾಂಪ್ರದಾಯ ಇವತ್ತಿಗೂ ತಿರುಪತಿಯಲ್ಲಿ ನಿತ್ಯವು ನಡೆಯುತ್ತಿದೆ. ಆದರೆ ಆಗಿನ ಅರ್ಥ ಸ್ವಲ್ಪವೂ ಸಹ ಇಲ್ಲ. ದೇವರಿಗೆ ಏನೋ ನಮ್ಮ ಕೂದಲುಗಳಿಂದ ಕೆಲಸವಿದ್ದಂತೆ ನನಗೆ ಈ ಕೋರಿಕೆ ನೆರವೇರಿಸು ನಿನಗೆ ನನ್ನ ತಲೆ ಕೂದಲನ್ನು ಕೊಡುತ್ತೇನೆಂದು ಮುಗಿಯುತ್ತಿದ್ದಾರೆ. ಜ್ಞಾನ ಸಾಂಪ್ರದಾಯವಾದ ತಲೆ ಮುಡಿಯಾಗಲಿ, ಹಾಗೇ ಆಲೋಚನೆಗಳನ್ನು ಇಲ್ಲದಂತೆ ಮಾಡಿದ್ದೇನೆಂದು ತಿಳಿಸುವ ಬೋಳು ತಲೆಯನ್ನು ತೋರಿಸುವುದರಲ್ಲಿನ ಅರ್ಥವಾಗಲಿ ಇಲ್ಲದಂತೆ ಹೋಗಿದೆ. ಗುಡಿಯ ಹತ್ತಿರ ತಲೆ ಬೋಳು ಮಾಡಿಸಿಕೊಳ್ಳಲು ಪೂರ್ವದಂತೆ ಈ ಆಚಾರವೂ ತಲೆ ಕೂದಲು ಬೆಳೆಸಿ ಮಂಗಳರ ಕೈಯಿಂದಲೇ ಕತ್ತರಿಸಿಕೊಳ್ಳುವುದು ಇಂದಿಗೂ ಇದ್ದರೂ, ಕೂದಲು ಬೆಳೆಸುವುದರಲ್ಲಿ ಅರ್ಥವಿಲ್ಲ, ಬೋಳಿಸಿಕೊಳ್ಳುವುದರಲ್ಲೂ ಅರ್ಥವಿಲ್ಲ. ಪೂರ್ವದಲ್ಲಿ ಈ ಆಚಾರ ಇತ್ತೆಂದು ಹೇಳಿಕೊಳ್ಳಲು ಇಂದಿಗೂ ಗುಡಿಗಳ ಬಳಿ ತಲೆಗೂದಲ ಸಮರ್ಪಣೆ ಇರುವುದು

ಸಂತೋಷಿಸಬೇಕಾದ ವಿಷಯ. ಗುಂಡು ಮಾಡಿಸಿಕೊಳ್ಳುವ ಎಷ್ಟೋ ಜ್ಞಾನಾರ್ಥ ಇರುವ ಸಾಂಪ್ರದಾಯಗಳು ಅರ್ಥರಹಿತವಾಗಿ ಹೋಗುವುದೇ ಅಲ್ಲದೆ ಅದನ್ನು ಜಾರಿ ಮಾಡಿದ ಬ್ರಾಹ್ಮಣರು ಕೊನೆಗೆ ನಾಯಿ ಬ್ರಾಹ್ಮಣರೆಂದು ಹೆಸರು ಹೇಳಿಕೊಳ್ಳುತ್ತಾ ಶುಭಕರವಾದ ಮಂಗಳರು (ಕ್ಷೌರಿಕರು) ಎಂದು ಹೇಳಿಕೊಳ್ಳದೆ ಹೋಗಿರುವುದು ಶೋಚನೀಯ.



# ಮೂರು ವಿಭೂತಿ ರೇಖೆಗಳು

ಪೂರ್ವಕಾಲದಲ್ಲಿ ಪರಮಾತ್ಮನ ಜ್ಞಾನವನ್ನು ತಿಳಿಸುವ ಕೆಲಸಗಳನ್ನೇ ಸಾಂಪ್ರದಾಯವಾಗಿ ಇಟ್ಟುಕೊಂಡು ಆಚರಿಸುವುದರಿಂದ ಹೊಸದಾಗಿ ಹುಟ್ಟಿ ಬೆಳೆಯುವವರಿಗೆ ಪರಂಪರೆಯಾಗಿ ಜ್ಞಾನವನ್ನು ತಿಳಿಸಬಹುದೆಂಬುವುದು ಅಂದಿನ ಹಿರಿಯರ ಆಶಯ. ಆ ಪದ್ಧತಿಯಲ್ಲಿಯೇ ಹಣೆಯ ಮೇಲೆ ಮೂರು ವಿಭೂತಿ ರೇಖೆಗಳನ್ನು ಇಟ್ಟುಕೊಳ್ಳುವುದು ನಡೆದಿದೆ. ಮೂರು ಬಿಳಿಯ ರೇಖೆಗಳನ್ನು ಇಡುವುದೇ ಅಲ್ಲದೆ ಅವುಗಳಲ್ಲಿ ಮಧ್ಯ ರೇಖೆಗೆ ಸಿಂಧೂರದಿಂದ ಬೊಟ್ಟನ್ನಿ ಡುತ್ತಿದ್ದರು. ಹಾಗೆ ಮಧ್ಯರೇಖೆಗೆ ಸಿಂಧೂರದ ಬೊಟ್ಟನ್ನಿಡುವುದರಿಂದ ಮೂರು ರೇಖೆಗಳಲ್ಲಿ ಮಧ್ಯರೇಖೆಗೆ ಪ್ರತ್ಯೇಕತೆ ಏರ್ಪಡುತ್ತದೆ. ಇಷ್ಟು ತತಂಗ ಮಾಡುವುದ ರಲ್ಲಿ ಯಾವುದೋ ಒಂದು ಉದ್ದೇಶ ಇರಬಹುದು ಅಲ್ಲವೆ! ಆದಿನ ಅವರ ಉದ್ದೇಶ ಏನೆಂಬುವುದನ್ನು ತಿಳಿದುಕೊಳ್ಳೋಣ.

ಮನುಷ್ಯನಿಗೆ ಮುಖ್ಯವಾದ ಶರೀರದ ಭಾಗ ತಲೆ ಮುಖ. ಯಾರನ್ನು ಗುರುತಿಸಬೇಕೆಂದರೂ ಅವರ ಮುಖವನ್ನು ನೋಡಿಯೇ ಗುರುತಿಸುತ್ತೇವೆ. ಯಾರ ಮನೋಭಾವನೆಗಳನ್ನು ತಿಳಿದುಕೊಳ್ಳಬೇಕೆಂದರೂ ಮುಖವನ್ನು ನೋಡಿ ತಿಳಿದುಕೊಳ್ಳಬಹುದು. ಮುಖವು ಎಲ್ಲರಿಗೂ ಒಂದು ಗುರುತಿನ ಕಾರ್ಡ್ ನಂತದ್ದು. ಆದ್ದರಿಂದ ಯಾರನ್ನು ಗುರುತಿಸಬೇಕೆಂದರೂ ಮುಖವನ್ನು ನೋಡಬೇಕಾಗಿದೆ. ಹೊರಗಿನ ವ್ಯಕ್ತಿಯ ಗುರುತಿಗೂ, ಒಳಗಿನ ವ್ಯಕ್ತಿತ್ವ ಮನೋಭಾವನೆಗಳ ಗುರುತಿಗೂ

ಮುಖ ಮುಖ್ಯವಾದ ಪ್ರತಿಬಿಂಬ. ಆದ್ದರಿಂದ ಪೂರ್ವದ ಹಿರಿಯರು ಮುಖದ ಮೇಲೆಯೇ ಅತಿ ಮುಖ್ಯವಾದ ದೇವರ ವಿಷಯವನ್ನು ಒಂದು ಗುರುತಾಗಿ ತಿಳಿಸಿದ್ದಾರೆ. ಮುಖದ ಮೇಲೆ ಗುರುತಾಗಿ ಇರಿಸಿ ತಿಳಿಸಿದ ಚಿಹ್ನೆಯೇ **ಮೂರು ವಿಭೂತಿರೇಖೆಗಳು**. ಮುಖದ ಹಣೆಯ ಭಾಗದಲ್ಲಿ ಎಲ್ಲರಿಗೂ ಸ್ವಲ್ಪ ಸ್ಥಳವಿರುತ್ತದೆ. ಮೂಗಿನ ಮೇಲ್ಭಾಗದಲ್ಲಿರುವುದರಿಂದ ಮೆದುಳಿಗೆ ಸಮಾನ ಭಾಗದಲ್ಲಿ ಹಣೆಯ ಭಾಗವಿದೆ. ಶಿರಸ್ಸು ದೈವ ನಿಲಯ ಮತ್ತು ಮಾಯೆಯ ನಿಲಯ. ನಮ್ಮ ತಲೆಯಲ್ಲಿಯೇ ದೇವರಿದ್ದಾನೆ, ಮಾಯೆಯೂ ಇದೆ. ಮಾಯೆಗೆ ಪ್ರತಿರೂಪ ಗುಣಗಳು. ಮಾಯೆ ಗುಣಗಳ ರೂಪದಲ್ಲಿದೆ. ಆದ್ದರಿಂದ ಮಾಯೆಗೆ ಅಂತ್ಯವಿಲ್ಲದ ವಿಕಾರಗಳಿಗೆ ತಲೆ ಮೇಲಿರುವ ಅಸಂಖ್ಯಾತ ಕೂದಲುಗಳನ್ನು ಗುರುತಾಗಿ ಹೇಳಿಕೊಂಡಿದ್ದೇವೆ. ಅವುಗಳನ್ನು ಮುಡಿಹಾಕುವುದು, ಕತ್ತರಿಸಿ ಇಲ್ಲದಂತೆ ಬೋಳು ಮಾಡಿಸಿಕೊಳ್ಳುವುದು, ಮಾಯೆಯನ್ನು ಜಯಿಸುವ ಗುರುತುಗಳೆಂದು ತಿಳಿದುಕೊಂಡಿದ್ದೇವೆ. ಮನುಷ್ಯ ಮಾಯೆಯಿಂದ ಹೊರಬಿದ್ದರೆ ತಿಳಿಯುವುದು ದೇವರು. ಆದ್ದರಿಂದ ಮೊದಲು ಮಾಯೆಗೆ ಗುರುತಾಗಿ ಲೆಕ್ಕವಿಲ್ಲದಷ್ಟು ಕೂದಲನ್ನು ತಲೆಮೇಲೆ ಇರುವಂತೆ ಮಾಡಿ, ಕೆಳಗೆ ಖಾಲಿ ಇರುವ ಹಣೆಯ ಭಾಗವನ್ನು ದೇವರು ಸೃಷ್ಟಿಸಿದ್ದಾನೆ. ತಲೆಯ ಮೇಲೆ ಅನೇಕ ಸೀಳಿಕೆಗಳ ರೂಪದಲ್ಲಿರುವ ಮಾಯೆಯನ್ನು ಜಯಿಸಿದರೆ ನಂತರ ದೇವರು ಈ ವಿಧವಾಗಿ ಇದ್ದಾನೆಂದು ತಿಳಿಯಬಲ್ಲನೆನ್ನುವುದಕ್ಕೆ ಗುರುತಾಗಿ ದೈವಸ್ಥಾನವಾದ ಹಣೆಯ ಭಾಗದಲ್ಲಿ ದೇವರ ವಿವರವನ್ನು ತಿಳಿಸುವ ಮೂರು ವಿಭೂತಿ ರೇಖೆಗಳನ್ನು ಇರಿಸಿದ್ದಾರೆ.

ದೇವರು ಕಲ್ಮಷವಿಲ್ಲದ ಸ್ವಚ್ಛವಾದವನೆಂದು ತಿಳಿಸುವುದಕ್ಕೆ, ಸಂಪೂರ್ಣ ಜ್ಞಾನಯುತನೆಂದು ತಿಳಿಸುವುದಕ್ಕೆ ಸ್ವಚ್ಛವಾದ ಬಿಳಿಯ ಬಣ್ಣವನ್ನು ಆಯ್ಕೆಮಾಡಿ ಬಿಳಿಯ ರೇಖೆಗಳನ್ನು ಹಣೆಯ ಮೇಲೆ ಎಳೆದಿದ್ದಾರೆ. ಮೇಲೆ ಮಾಯೆ ಕೆಳಗೆ ದೇವರಿರುವಂತೆ ಗುಡಿಯೊಳಗೆ ಪ್ರತಿಮೆಗಳ ಮೇಲ್ಭಾಗದಲ್ಲಿ ಮಾಯೆ ಗುರುತಾದ ವಿಕೃತಾಕಾರವನ್ನು ಇಟ್ಟಿರುವುದನ್ನು ನಾವು ನೋಡಿಯೇ ಇದ್ದೇವೆ. ಹಾಗೆಯೇ ನಮ್ಮ ತಲೆಯಲ್ಲಿಯೂ ಸಹ ಮಾಯೆ ಮೇಲೆ ಕೆಳಗೆ ದೇವರಿರುವಂತೆ ಅರ್ಥದಿಂದ

ಮೇಲೆ ಅಸಂಖ್ಯಾತ ಕೂದಲುಗಳ ಕೆಳಗೆ ಹಣೆಯ ಭಾಗವಿದೆ. ಹಾಗೆ ಮೂರು ರೇಖೆಗಳನ್ನು ಏಕೆ ಇಟ್ಟಿದ್ದಾರೆಂಬ ಸಂಶಯ ಕೆಲವರಿಗೆ ಬರಬಹುದು. ಅದಕ್ಕೆ ಉತ್ತರವೇನೆಂದರೆ! ದೇವರು ಪ್ರತಿ ಶರೀರದಲ್ಲಿಯೂ ಮೂರು ವಿಧಗಳಾಗಿ ಇದ್ದಾನೆ. **ಒಂದು ಜೀವಾತ್ಮ, ಎರಡನೆಯದು ಆತ್ಮ, ಮೂರನೆಯದು ಪರಮಾತ್ಮ.** ಮೂರು ವಿಧಗಳಾಗಿರುವ ದೇವರನ್ನು ಮೂರು ವಿಭೂತಿ ರೇಖೆಗಳ ಗುರುತಾಗಿ ಹಣೆಯ ಮೇಲೆ ಇಟ್ಟಿದ್ದಾರೆ. ಮೇಲೆ ಇರುವ ರೇಖೆ ಪರಮಾತ್ಮ ಎಂದೂ, ಮಧ್ಯದಲ್ಲಿರುವ ರೇಖೆ ಆತ್ಮ ಎಂದೂ, ಕೆಳಗಿರುವ ರೇಖೆ ಜೀವಾತ್ಮ ಎಂದೂ ಆದಿನದ ಹಿರಿಯರ ಭಾವ. ಮೂರು ರೇಖೆಗಳಲ್ಲಿ ಕೆಳಗಿನ ರೇಖೆಯಾದ ಜೀವಾತ್ಮ ಪರಮಾತ್ಮನ ಒಂದು ಅಂಶವೇ ಆದರೂ ಕರ್ಮಬದ್ಧನಾಗಿದ್ದಾನೆ. ಜೀವಿಯಾದವನ್ಯಾರೂ ಮೊದಲ ಮೇಲಿನ ರೇಖೆಯ ಗುರುತಾದ ಪರಮಾತ್ಮನನ್ನು ಕರ್ಮ ಇರುವವರೆಗೂ ತಿಳಿಯಲಾರರು. ಸಜೀವವಾಗಿ ಭೂಮಿ ಮೇಲೆ ಇರುವವರೆಗೂ ಪರಮಾತ್ಮನನ್ನು ಯಾರು ತಿಳಿಯಲಾರರು. ಪರಮಾತ್ಮ ನನ್ನು ತಿಳಿಯುವುದಕ್ಕೆ ಕರ್ಮವಿಲ್ಲದಂತೆ ಹೋಗಬೇಕು. ಕರ್ಮ ಇಲ್ಲದಂತೆ ಮಾಡಿಕೊಳ್ಳುವುದಕ್ಕೆ ಆರಾಧಿಸಬೇಕಾಗಿರುವುದು, ತಿಳಿಯಬೇ ಕಾಗಿರುವುದು ಎರಡನೇ ಆತ್ಮವನ್ನು. ಆತ್ಮಜ್ಞಾನವನ್ನು ತಿಳಿಯುವುದರಿಂದ ಜ್ಞಾನಾಗ್ನಿ ಏರ್ಪಟ್ಟು ಕರ್ಮವನ್ನು ಸುಟ್ಟುಹಾಕುತ್ತದೆ. ಕರ್ಮ ಸಶೇಷವಾಗಿ ಮುಗಿದುಹೋ ದಾಗ ಪರಮಾತ್ಮನನ್ನು ಸೇರಬಹುದು. ಆದ್ದರಿಂದಲೇ ನಾವು ತಿಳಿಯಬೇಕಾಗಿರುವುದು ಎರಡನೇ ಆತ್ಮನೆಂದು ಹಣೆಯ ಮೇಲೆ ಎರಡನೇ ರೇಖೆಯನ್ನು ಸಿಂಧೂರದಿಂದ ಬೊಟ್ಟು ಇಟ್ಟು ಗುರುತಿಸಿದ್ದಾರೆ. ಹಣೆಯ ಮೇಲೆ ವಿಭೂತಿ ರೇಖೆಗಳು ಧರಿಸಿದ ಪೂರ್ವಿ ಕರು ಎರಡನೇ ರೇಖೆಯ ಮೇಲೆ ಸಿಂಧೂರದಿಂದ ಬೊಟ್ಟು ಇಟ್ಟುಕೊಂಡು, ನಾವು ತಿಳಿದು ಆರಾಧಿಸಬೇಕಾಗಿರುವುದು ಇದೇಯೆಂದು ತಿಳಿಸುತ್ತಿದ್ದರು.

ಇಂದೂಸಂಪ್ರದಾಯವಾದ ವಿಭೂತಿ ರೇಖೆಗಳನ್ನು ಇಂದಿಗೂ ಇಟ್ಟು ಕೊಳ್ಳುವವರಿದ್ದಾರೆ. ವಿಭೂತಿ ಧರಿಸುವವರಿದ್ದರೂ ಸ್ಪಷ್ಟವಾಗಿ ಮೂರು

ರೇಖೆಗಳನ್ನು ಇಟ್ಟುಕೊಳ್ಳದೆ ಹಣೆಯೆಲ್ಲಾ ವಿಭೂತಿಯನ್ನು ಬಳಿದುಕೊಳ್ಳುತ್ತಿದ್ದಾರೆ. ಒಂದು ವೇಳೆ ಎಲ್ಲಾದರೂ ಮೂರು ವಿಭೂತಿ ರೇಖೆಗಳನ್ನು ಬಿಡಿ ಬಿಡಿಯಾಗಿ ಕಾಣಿಸುವಂತೆ ಧರಿಸುವವರಿದ್ದರೂ ಅವರು ಮಧ್ಯ ರೇಖೆಗೆ ಸಿಂಧೂರದ ಬೊಟ್ಟು ಇಡುತ್ತಿಲ್ಲ. ಮೂರು ರೇಖೆಗಳನ್ನು ಬಿಟ್ಟು ಕೆಳಗೆ ಬೊಟ್ಟು ಇಡುತ್ತಿದ್ದಾರೆ. ವಿಭೂತಿಯನ್ನು ಮೂರು ರೇಖೆಗಳಾಗಲ್ಲದೆ ಬೆರೆಸಿ ತಿಕ್ಕುವುದು, ರೇಖೆಗಳಿದ್ದರು ಮಧ್ಯರೇಖೆಯನ್ನು ಗುರುತಿಸದಿರುವುದು ಸಂಪ್ರದಾಯ ವಿರುದ್ಧವಾಗುತ್ತದೆ. ಸಕ್ರಮ ಆಚರಣೆ ಇಲ್ಲದೆ ಹೋಗುವುದಕ್ಕೆ ಕಾರಣ ವಿಭೂತಿ ರೇಖೆಗಳ ಅರ್ಥ ತಿಳಿಯದಂತಿರುವುದೆ. ವಿಭೂತಿ ರೇಖೆಗಳ ಅಲಂಕರಣೆ ಸಂಪ್ರದಾಯವೆಂದು ಅದರ ಅರ್ಥ ಹೀಗಿದೆಯೆಂದು ತಿಳಿಯದಿರುವುದರಿಂದ ವಿಭೂತಿಧಾರಣೆ ಇತರರಿಗೆ ವ್ಯರ್ಥವಾದುದಾಗಿ ತಿಳಿಯುತ್ತದೆ. ಈ ಕಾಲದಲ್ಲಿ ವಿಭೂತಿಧಾರಣೆ ಸ್ವಾಮಿಗಳಿಗೆ ಮಾತ್ರವೇ ಪರಿಮಿತಿಯಾಗಿ ಹೋಗಿದೆ. ಸ್ವಾಮಿಗಳೂ ಸಹ ವಿಭೂತಿಧಾರಣೆಯನ್ನು ಸಂಪ್ರದಾಯಬದ್ಧವಾಗಿ ಧರಿಸುತ್ತಿಲ್ಲ. ಕೆಲವರು ವಿಭೂತಿ ಧರಿಸಿದರೂ ರೇಖೆಗಳಾದರೂ ಇರುವುದಿಲ್ಲ, ರೇಖೆಗಳಿದ್ದರೆ ಮಧ್ಯರೇಖೆಗೆ ಬೊಟ್ಟಾದರೂ ಇರುವುದಿಲ್ಲ. ಹೀಗೆ ಸ್ವಲ್ಪಕಾಲ ಕಳೆದರೆ ಕೊನೆಗೆ ವಿಭೂತಿ ಧರಿಸುವ ಸಾಂಪ್ರದಾಯವೇ ಇಲ್ಲದಂತೆ ಹೋಗುವ ಅಪಾಯವಿದೆ.



# ಮೂಗು ನತ್ತುಗಳು

ತಲೆ ಮೇಲೆ ಜುಟ್ಟುಮುಡಿ, ಹಣೆಯ ಮೇಲೆ ವಿಭೂತಿ ರೇಖೆಗಳು, ಮೂಗುಗಳಿಗೆ ಮೂಗು ನತ್ತುಗಳನ್ನಿಡುವುದು ಮುಖದ ಮೇಲೆ ಇರುವ ಮೂರು ಮುಖ್ಯವಾದ ಸಾಂಪ್ರದಾಯಗಳಾಗಿ ಪೂರ್ವಕಾಲದಲ್ಲಿ ತಿಳಿಯುತ್ತಿದ್ದರು. ಇಂದೂಗಳಲ್ಲಿ ಮುಖದ ಮೇಲಿರುವ ಮೂರು ಆಚರಣೆಗಳಲ್ಲಿ ಇಬ್ಬರು ಪುರುಷರು, ಇಬ್ಬರು ಸ್ತ್ರೀಯರು ಸಾಂಪ್ರದಾಯಬದ್ಧವಾಗಿ ಆಚರಿಸುತ್ತಿದ್ದರು. ತಲೆಮುಡಿ, ವಿಭೂತಿ ರೇಖೆಗಳು ಪುರುಷರು ಆಚರಣೆ ಮಾಡಿದರೆ, ತಲೆಮುಡಿ

ಮೂಗು ನತ್ತುಗಳನ್ನು ಧರಿಸುವ ಆಚಾರ ಸ್ತ್ರೀಯರಿಗಿರುತ್ತಿತ್ತು. ಸ್ತ್ರೀಯರು ಭ್ರೂಮಧ್ಯ ಸ್ಥಾನದಲ್ಲಿ ಮೂಗಿನ ಮೇಲೆ ಕೊನೆ ಭಾಗದಲ್ಲಿ ಕುಂಕುಮದ ಬೊಟ್ಟನ್ನಿಡುತ್ತಿದ್ದರು. ಕಣ್ಣುಬ್ಬುಗಳ ಮಧ್ಯಭಾಗದಲ್ಲಿ ಆತ್ಮ ನಿವಾಸವಾಗಿದೆಯೆಂದೂ, ಆತ್ಮವನ್ನು ಪೂಜಿಸುತ್ತಿದ್ದೇವೆಂಬ ಉದ್ದೇಶದಿಂದ ಕುಂಕುಮ ಬೊಟ್ಟನ್ನು ಇಡುತ್ತಿದ್ದರು. ಗಂಡಸರೂ ಸಹ ವಿಭೂತಿ ರೇಖೆಗಳಲ್ಲಿ ಆತ್ಮವನ್ನೇ ಗುರುತಿಸಿ ಸಿಂಧೂರದ ಬೊಟ್ಟು ಇಡುತ್ತಿದ್ದರು. ಗಂಡಸರು ಸಿಂಧೂರದಿಂದ ಆತ್ಮವನ್ನು, ಹೆಂಗಸರು ಕುಂಕುಮದಿಂದ ಆತ್ಮ ಸ್ಥಾನವನ್ನು ಪೂಜ್ಯ ಭಾವದಿಂದ ಗುರುತಿಸುತ್ತಿದ್ದರು. ಹೆಂಗಸರಿಗೆ ವಿಭೂತಿ ಧರಿಸುವುದು ಇರುತ್ತಿರಲಿಲ್ಲ. ಗಂಡಸರಿಗೆ ಮೂಗು ನತ್ತುಗಳು ಧರಿಸುವುದು ಇರುತ್ತಿರಲಿಲ್ಲ.

ಸ್ತ್ರೀಯರಿಗೆ ಮುಖ್ಯ ಸಾಂಪ್ರದಾಯವಾದ ಮೂಗುನತ್ತುಗಳು ಧರಿಸುವುದು ಇಂದಿಗೂ ಸ್ವಲ್ಪ ಉಳಿದುಕೊಂಡಿದೆ. ಆದರೂ ಮೂಗು ನತ್ತುಗಳಲ್ಲಿನ ಸಾಂಪ್ರದಾಯದ ಅರ್ಥ ತಿಳಿದಿಲ್ಲ. ಪೂರ್ವಕಾಲದಲ್ಲಿ ಸ್ತ್ರೀಯರ ಮೂಗು ನತ್ತುಗಳಲ್ಲಿನ ಸಾಂಪ್ರದಾಯ ಏನೆಂಬುವುದನ್ನು ತಿಳಿದುಕೊಳ್ಳೋಣ. ನಮ್ಮ ಶರೀರದಲ್ಲಿ ಸುಮಾರು ಮೂರುವರೆ ಲಕ್ಷಗಳ ನಾಡಿಗಳು ಇವೆ, ಅವುಗಳಲ್ಲಿ ಆತ್ಮಚೈತನ್ಯ ಶಕ್ತಿ ಪ್ರವಹಿಸುತ್ತಾ ಶರೀರದಲ್ಲಿನ ಅಣುಅಣುವನ್ನು ಕದಲಿಸಿ ಕೆಲಸ ಮಾಡಿಸುತ್ತಿದೆ. ಲಕ್ಷಗಳ ನಾಡಿಗಳಲ್ಲಿ ಪ್ರವಹಿಸುತ್ತಿರುವ ಆತ್ಮ ಚೈತನ್ಯಶಕ್ತಿಯು ಒಂದು ಕೇಂದ್ರದಿಂದ ಬರುತ್ತಿದೆ. ಆ ಕೇಂದ್ರವು ಬ್ರಹ್ಮನಾಡಿಯಲ್ಲಿದೆ. ಇದರಿಂದ ಆತ್ಮ ಬ್ರಹ್ಮನಾಡಿಯಲ್ಲಿ ನಿವಾಸವಾಗಿದೆ ಎಂದು ತಿಳಿದುಬರುತ್ತಿದೆ. ಬ್ರಹ್ಮನಾಡಿಯಿಂದ ಆತ್ಮವು ಮೊದಲು ಎರಡು ನರಗಳ ಮೂಲಕ ಶರೀರವೆಲ್ಲವೂ ವ್ಯಾಪಿಸುತ್ತದೆ. ಮೊದಲ ಆತ್ಮ ಪ್ರವೇಶ ದ್ವಾರಗಳಾದ ಎರಡು ನಾಡಿಗಳನ್ನು ತಿಳಿಸುವುದೇ **"ಮೂಗು ನತ್ತುಗಳು ಧರಿಸುವ ಸಾಂಪ್ರದಾಯ"**. ಶರೀರದಲ್ಲಿ ಜನ್ಮ ಪ್ರಾರಂಭವಾದಾಗ ಬ್ರಹ್ಮನಾಡಿಯಿಂದ ಆತ್ಮ ಮೊದಲು ಬಲಎಡಗಳಾಗಿರುವ ಎರಡು ನಾಡಿಗಳಲ್ಲಿ ಒಂದೇ ಬಾರಿ ಪ್ರವೇಶಿಸುತ್ತದೆ. ಬಲಗಡೆ ನಾಡಿಯನ್ನು ಸೂರ್ಯನಾಡಿ ಎಂದೂ, ಎಡಗಡೆ ನಾಡಿಯನ್ನು ಚಂದ್ರನಾಡಿ ಎಂದು

ಎನ್ನುತ್ತಿದ್ದೇವೆ. ಮಧ್ಯದಲ್ಲಿರುವ ಬ್ರಹ್ಮನಾಡಿಯನ್ನು ಸುಷುಮ್ನನಾಡಿ ಎಂದೂ, ಬಲಗಡೆ ಇರುವ ಸೂರ್ಯ ನಾಡಿಯನ್ನು ಇಡನಾಡಿ ಎಂದೂ, ಎಡಗಡೆ ಇರುವ ಚಂದ್ರನಾಡಿಯನ್ನು ಪಿಂಗಳನಾಡಿ ಎಂದೂ ಸಹ ಹೇಳುತ್ತಿದ್ದೇವೆ.

ಈ ವಿಧವಾಗಿ ನಮ್ಮ ಶರೀರದಲ್ಲಿ ಆತ್ಮ ವ್ಯಾಪಿಸುತ್ತದೆ ಎಂದು ತಿಳಿಸುವ ಸಂಪ್ರದಾಯವೇ ಮೂಗುನತ್ತುಗಳು ಧರಿಸುವ ಆಚರಣೆಯಾಗಿ ಇರುತ್ತಿತ್ತು. ಸ್ತ್ರೀಯರ ಮೂಗು ರಂಧ್ರಗಳಲ್ಲಿ ಬಲಮೂಗಿನ ಪುಟಕ್ಕೆ ಸೂರ್ಯ ಬಿಂಬವನ್ನು ಹೋಲುವ ಗುಂಡನೆಯ ಆಕಾರವಿರುವ ಮೂಗುನತ್ತು ಇರುತ್ತಿತ್ತು. ಹಾಗೆಯೇ ಎಡಗಡೆಯ ಮೂಗಿನ ಪುಟಕ್ಕೆ ಚಂದ್ರಬಿಂಬವನ್ನು ಹೋಲುವ ಅರ್ಧಚಂದ್ರ ಆಕೃತಿ ಇರುವ ಮೂಗುನತ್ತನ್ನು ಇಡುತ್ತಿದ್ದರು. ಪೂರ್ವದಲ್ಲಿ ಮೂಗುನತ್ತುಗಳು ಇವೆ ಎಂದರೆ ಅವು ಸೂರ್ಯ ಚಂದ್ರ ಆಕಾರಗಳೇ ಹೊರತು ಬೇರೆ ವಿಧವಾಗಿ ಇರುತ್ತಿರಲಿಲ್ಲ. ಈ ಕಾಲದಲ್ಲಿ ಅವುಗಳ ಆಕಾರಗಳು ಪೂರ್ತಿಯಾಗಿ ಬದಲಾಗಿಹೋಗಿ ವಿಧವಿಧವಾದ ಮೂಗುನತ್ತುಗಳು ತಯಾರಾಗಿವೆ. ಪೂರ್ವ ಕಾಲದಲ್ಲಿ ಮೂಗುನತ್ತುಗಳು ಇರುತ್ತಿದ್ದವೆಂಬುವುದಕ್ಕೆ ಆಧಾರವಾಗಿ ಅಲ್ಲಲ್ಲಿ ಆಕಾರ ಬದಲಾದ ಮೂಗು ನತ್ತುಗಳಾದರೂ ಇವೆ. ಪೂರ್ವದಲ್ಲಿ ಸೂರ್ಯಚಂದ್ರ ಆಕಾರವಿರುವ ಮೂಗುನತ್ತುಗಳನ್ನೇ ಅಲ್ಲದೆ ಬ್ರಹ್ಮನಾಡಿಯನ್ನು ತಿಳಿಸುತ್ತಾ ಎರಡು ರಂದ್ರಗಳಿಗೂ ಮಧ್ಯದಲ್ಲಿ ಮೂಗಿನ ಕೊನೆಯ ಭಾಗದಲ್ಲಿ **"ಬುಲಾಕಿ"** ಎಂಬ ಹೆಸರಿರುವ ಒಂದು ರಿಂಗಿನಂತಿರುವ ಬಂಗಾರದ ಕೊಂಡಿಯನ್ನು ತಗುಲಿಸಿ ಅದಕ್ಕೆ ಒಂದು ಮುತ್ತನ್ನು ಜೋಡಿಸುತ್ತಿದ್ದರು. ಎರಡು ರಂಧ್ರಗಳ ಮಧ್ಯದಲ್ಲಿರುವ ಕೊಂಡಿಯಂತದ್ದನ್ನು ಬ್ರಹ್ಮನಾಡಿಯೆಂದು ಪೂರ್ವದಲ್ಲಿ ಗುರುತಿಸುತ್ತಿದ್ದರು. ಬ್ರಹ್ಮನಾಡಿಯಲ್ಲಿ ಸ್ವಚ್ಚವಾದ ಆತ್ಮವಿದೆ ಆದ್ದರಿಂದ ಆತ್ಮವನ್ನು ಬಿಳಿಯ ಮುತ್ತಿನಂತೆ ತೋರಿಸುತ್ತಾ ಮಧ್ಯದಲ್ಲಿ ನೇತಾಡುವಂತೆ ಧರಿಸುತ್ತಿದ್ದರು. ಈ ಅಲಂಕಾರದಿಂದ ಸೂರ್ಯ ಚಂದ್ರ ನಾಡಿಗಳು ಮತ್ತು ಅವುಗಳ ಮಧ್ಯ ಇರುವ ಬ್ರಹ್ಮನಾಡಿ ತಿಳಿಯುತ್ತದೆ. ಆ ವಿಧವಾಗಿ ತಿಳಿದುಕೊಳ್ಳಲು ಮೂಗು ನತ್ತುಗಳನ್ನು ಧರಿಸುವ ಆಚಾರವಿರುತ್ತಿತ್ತು. ಈಗಲೂ ಭರತನಾಟ್ಯ ಮಾಡುವವರ

ಅಲಂಕಾರದಲ್ಲಿ ಮೂಗುನತ್ತುಗಳು ಎರಡು ಬೇರೆ ಆಕಾರದಲ್ಲಿದ್ದರೂ ಮಧ್ಯದಲ್ಲಿರುವ ಬ್ರಹ್ಮನಾಡಿಗೆ ಗುರುತಾಗಿ ಮುತ್ತಿನಿಂದ ಪದ್ಧತಿಯ ಪ್ರಕಾರವಿದೆ. ಎಷ್ಟೋ ಅರ್ಥವಿರುವ ಮೂಗುನತ್ತುಗಳು ಮತ್ತು ಬುಲಾಕಿ ಇಂದೂ ಸಾಂಪ್ರದಾಯಗಳಲ್ಲಿ ಮುಖ್ಯವಾದ ಅಲಂಕರಣದ ಆಚಾರವೆಂದು ತಿಳಿದುಕೊಳ್ಳಬೇಕು. ಈಗಿನಿಂದಲಾದರೂ ನಮ್ಮ ಮನೆಗಳಲ್ಲಿನ ಸ್ತ್ರೀಯರಿಂದ ಸೂರ್ಯಚಂದ್ರರ ಮೂಗು ನತ್ತುಗಳನ್ನು ಧರಿಸುವಂತೆ ಮಾಡಿ ಸಾಂಪ್ರದಾಯ ವನ್ನು ಕಾಪಾಡಿಕೊಳ್ಳೋಣ.



## ಪಂಚೆಕಟ್ಟು, ಸೀರೆಕಟ್ಟು

ಗಂಡಸರು ಸೊಂಟದ ಸುತ್ತಲೂ ಕಟ್ಟಿಕೊಳ್ಳುವ ಪಂಚೆ ಕಟ್ಟು ವಿಕೆಯಲ್ಲಿಯೂ, ಸ್ತ್ರೀಯರು ಕಟ್ಟಿಕೊಳ್ಳುವ ಸೀರೆ ಕಟ್ಟುವಿಕೆಯಲ್ಲಿಯೂ ಸಹ ಜ್ಞಾನವನ್ನು ಒಳಗೊಂಡಿರುವ ಆಚರಣೆಯನ್ನು ಪೂರ್ವಕಾಲದಲ್ಲಿ ಹಿರಿಯರು ಇಟ್ಟಿದ್ದಾರೆ. ಈ ಕಾಲದಲ್ಲಿ ಪ್ಯಾಂಟ್‌ಗಳು ಬಂದು ಗಂಡಸರಿಗೆ ಪಂಚೆ ಕಟ್ಟುವುದು ಅಪರೂಪವಾಗಿದೆ. ಹಾಗೆಯೇ ಪಂಜಾಬಿ ಡ್ರಸ್ಸುಗಳು ಬಂದು ಹೆಂಗಸರಿಗೆ ಸೀರೆ ಕಟ್ಟುವುದು ಅಪರೂಪವಾಗಿದೆ. ಸ್ವಲ್ಪ ಕಾಲಕ್ಕೆ ಪಂಚೆ ಎಂದರೆ ಏನೆಂಬುವುದು ಗಂಡಸರಿಗು, ಸೀರೆ ಎಂದರೆ ಏನೆಂಬುವುದು ಹೆಂಗಸರಿಗು ತಿಳಿಯದಂತೆ ಹೋಗುವ ಕಾಲ ಬರಬಹುದು. ಈಗಲೂ ಅಲ್ಲಲ್ಲಿ ಪಂಚೆ ಕಟ್ಟುವ ಗಂಡಸರು ಸೀರೆ ಕಟ್ಟುವ ಹೆಂಗಸರು ಇದ್ದಾರೆ. ಪಂಚೆ, ಸೀರೆ ಕಟ್ಟುವ ಪ್ರಜೆಗಳು ಎಲ್ಲಾದರೂ ಇದ್ದರೂ ಅವುಗಳಲ್ಲಿನ ಅರ್ಥ ತಿಳಿದಿಲ್ಲವೆಂದೇ ಹೇಳಬಹುದು. ಪೂರ್ವದಲ್ಲಿದ್ದು ಈಗ ಇಲ್ಲದ ಪಂಚೆಕಟ್ಟು, ಸೀರೆಕಟ್ಟು ಇವುಗಳ ಆಚಾರ ಅರ್ಥವೇನೆಂಬುವುದನ್ನು ತಿಳಿದುಕೊಳ್ಳೋಣ.

ಗಂಡಸರು ಪಂಚೆ ಕಟ್ಟುವಾಗ ಹೊಟ್ಟೆಯ ಮುಂದೆ ನೆರಿಗೆ ಹಾಕಿ ಕಟ್ಟಿಕೊಳ್ಳುತ್ತಿದ್ದರು. ನೆರಿಗೆಗಳು ಎಂದರೆ ಪಂಚೆಯನ್ನು ಮಡತೆ ಹಾಕುವುದು.

ಪಂಚೆಯನ್ನು ಸೊಂಟದ ಸುತ್ತಲೂ ಕಟ್ಟಿ, ಉಳಿದ ಪಂಚೆಯನ್ನು ಏಳು ಮಡತೆಗಳನ್ನು ಹಾಕಿ ಹೊಟ್ಟೆಯ ಮುಂದೆ ಸಿಕ್ಕಿಸಿಕೊಳ್ಳುತ್ತಿದ್ದರು. ಹಾಗೆಯೇ ಹೆಂಗಸರು ಸ್ವಲ್ಪ ಸೀರೆಯನ್ನು ಏಳು ಮಡತೆಗಳ ನೆರಿಗೆಗಳನ್ನು ಹಾಕಿ ಸೊಂಟದ ಹಿಂದೆ ಸಿಕ್ಕಿಸಿಕೊಳ್ಳುತ್ತಿದ್ದರು. ಹೆಂಗಸರು ಹಿಂದಕ್ಕೆ ಗಂಡಸರು ಮುಂದೆ ನೆರಿಗೆ ಸಿಕ್ಕಿಸುವುದು ಇಂದಿಗೂ ಕರ್ನಾಟಕ ಪ್ರಾಂತದಲ್ಲಿ ಉಳಿದು ಕೊಂಡಿದೆ. ಕೆಲವು ಸಾಂಪ್ರದಾಯ ಬ್ರಾಹ್ಮಣ ಕುಟುಂಬಗಳಲ್ಲಿಯೂ ಸಹ ಇದೆ. ಕರ್ನಾಟಕ ಗ್ರಾಮೀಣ ಪ್ರಾಂತಗಳಲ್ಲಿ ಈಗಲೂ ಹೆಂಗಸರು ಗಂಡಸರು ಮಡತೆಗಳನ್ನಾಕಿ ಕಟ್ಟುವುದು ಇದೆ. ಅಲ್ಲಿ ಆಚಾರ ಸ್ವಲ್ಪ ಉಳಿದುಕೊಂಡಿದ್ದರೂ ಏಳು ಮಡತೆಗಳ ಪದ್ಧತಿ ಅವರಿಗೆ ತಿಳಿದಿಲ್ಲ. ಏಳು ಮಡತೆಗಳನ್ನಿಡದೆ ಹೆಚ್ಚು ಕಡಿಮೆ ಮಡತೆ ಗಳನ್ನಿಡುತ್ತಿದ್ದಾರೆ.

ನಮ್ಮ ಶರೀರವನ್ನು ಕದಲಿಸಿ ನಡೆಸುವ ಆತ್ಮ ಏಳು ಕೇಂದ್ರಗಳಲ್ಲಿ ವ್ಯಾಪಿಸಿಕೊಂಡಿದೆ ಎಂದು, ಏಳು ಕೇಂದ್ರಗಳಿಂದ ಬರುವ ಶಕ್ತಿಯಿಂದಲೇ ನಮ್ಮ ಶರೀರದಲ್ಲಿ ಶ್ವಾಸ ಆಡುತ್ತಿದೆ ಎಂದು ತಿಳಿಯಲು ಶರೀರಕ್ಕೆ ಸುತ್ತಿರುವ ಬಟ್ಟೆಯನ್ನು ಏಳು ಮಡತೆಗಳನ್ನು ಹಾಕುತ್ತಿದ್ದರು. ಒಂದೊಂದು ನಾಡೀಕೇಂದ್ರದ ಮೂಲಕ ಸ್ವಲ್ಪ ಹೊತ್ತು ಶರೀರ ಶ್ವಾಸವನ್ನು ಆತ್ಮ ನಡೆಸುತ್ತಿದೆ. ಒಂದು ಕೇಂದ್ರವೊಂದರ ಶ್ವಾಸದ ಆರಂಭವನ್ನು ಅಂತ್ಯವನ್ನು ಒಂದು ಮಡತೆಯಾಗಿ ಲೆಕ್ಕಿಸಿ, ದಿನಕ್ಕೆ ಏಳು ಕೇಂದ್ರಗಳ ಮೂಲಕ ಆಡುವ ಶ್ವಾಸದಿಂದಲೇ ಶರೀರ ಬದುಕುತ್ತಿದೆ ಆದ್ದರಿಂದ ಶರೀರಕ್ಕೆ ಸುತ್ತುವ ಬಟ್ಟೆಯನ್ನು ಏಳು ಮಡತೆಗಳನ್ನಿಟ್ಟು ಏಳು ನಾಡಿಕೇಂದ್ರಗಳು ಎಲ್ಲರಿಗೂ ತಿಳಿಯುವಂತೆ ಮಾಡಿದ್ದಾರೆ. ಪೂರ್ವಕಾಲದಲ್ಲಿ ಗಂಡಸರು ಪಂಚೆಗಳನ್ನು, ಹೆಂಗಸರು ಸೀರೆಗಳನ್ನು ಕಟ್ಟುತ್ತಾ ಅವರ ವಸ್ತ್ರಗಳಿಗೆ ಏಳು ಮಡತೆಗಳನ್ನೇ ಅರ್ಥದಿಂದ ಇಟ್ಟುಕೊಳ್ಳುತ್ತಿದ್ದರು. ಹಾಗೆ ಮಾಡುವುದರಿಂದ ಈ ಶರೀರವು ಆತ್ಮದ ಏಳು ನಾಡೀಕೇಂದ್ರಗಳ ಮೂಲಕವೇ ಜೀವಿಸುತ್ತಿದೆಯೆಂದು ಜ್ಞಾಪಕ ಮಾಡಿಕೊಳ್ಳುತ್ತಿದ್ದರು. ಪೂರ್ವದಲ್ಲಿ ಜ್ಞಾನವಿರುವ ಆಚರಣೆಗಳನ್ನೇ ಹಿರಿಯರು ನಿರ್ಣಯಿಸಿ ಇಟ್ಟಿದ್ದಾರೆ. ಅವುಗಳನ್ನು

ಆಚರಿಸುತ್ತಾ ಜ್ಞಾನವನ್ನು ಅಭಿವೃದ್ಧಿ ಮಾಡಿಕೊಳ್ಳುವವರು ಪೂರ್ವದಲ್ಲಿದ್ದರು. ಕಾಲಗಮನದಲ್ಲಿ ಅರ್ಥಹೋದರೂ ಆಚರಣೆಗಳು ಕೆಲವು ಪ್ರಾಂತಗಳಲ್ಲಿ ಮಾತ್ರ ಉಳಿದುಕೊಂಡಿವೆ. ಅರ್ಥವಿಲ್ಲದ ಆಚರಣೆಗಳು ಉಸಿರು ಹೋಗಿರುವ ಶರೀರಗಳಿದ್ದಂತೆ. ಸ್ವಲ್ಪಮಟ್ಟಿಗಾದರೂ ಕಟ್ಟುಬೊಟ್ಟು ಸಾಂಪ್ರದಾಯಗಳನ್ನು ನಾವು ಆಚರಿಸಿ, ಅವುಗಳಿಗೆ ಪ್ರಾಣಕೊಟ್ಟು ಇತರರು ಆಚರಿಸುವಂತೆ ಮಾಡೋಣ.

ಇಂದೂ ಸಾಂಪ್ರದಾಯಗಳಲ್ಲಿ ಮನುಷ್ಯ ತನ್ನ ಶರೀರಕ್ಕೆ ತಗಲಿಸಿ ಕೊಂಡಿರುವ ಆಚಾರಗಳಲ್ಲಿ ಕೆಲವನ್ನು ತಿಳಿದುಕೊಳ್ಳಬೇಕಾದವುಗಳು ಇವೆ. ಅಂತವುಗಳಲ್ಲಿ ಎಷ್ಟೋ ಆಚರಣೆಗಳು ಅರ್ಥಗಳನ್ನು ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎಂಬ ಪುಸ್ತಕದಲ್ಲಿ ಇವೆ. ಜಿಜ್ಞಾಸಿಗಳು ದೇವಾಲಯ ರಹಸ್ಯಗಳು ಓದಿ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.



# ಶವಯಾತ್ರೆ

ಪ್ರಪಂಚದಲ್ಲಿ ಪ್ರತಿ ಜೀವಿ ನಿರ್ಣಯಿಸಲ್ಪಟ್ಟಿರುವ ವಾಯುವಿನ (ಆಯುವಿನ) ಪ್ರಕಾರ ಜೀವಯಾತ್ರೆ ಸಾಗಿಸಿ ಮರಣಿಸುವುದು ಸಹಜ. ಈ ಜೀವನ ಯಾತ್ರೆ ನಿರ್ಣಯಿಸಲ್ಪಟ್ಟ ವಾಯುವಿನ ಪ್ರಕಾರ ಒಂದು ಶರೀರದಲ್ಲಿ ಸಾಗುತ್ತಿದೆ. ಶರೀರವೆಂಬ ಬಂಡಿಯಲ್ಲಿ ನಿರ್ಣಯಿಸಲ್ಪಟ್ಟ ವಾಯುವಿನ ಅಳತೆಯ ದೂರ ಪ್ರಯಾಣಿಸಿ, ಎಲ್ಲಿ ವಾಯುವಿನ ಅಳತೆ ಮುಗಿದುಹೊಗುತ್ತಿದೆಯೋ ಅಲ್ಲಿ ಶರೀರದಿಂದ ಜೀವಿ ಇಳಿದು ಹೋಗಬೇಕಾಗಿದೆ. ಅದನ್ನೇ ಮರಣ ಎನ್ನುತ್ತಿರುತ್ತೇವೆ. ಇದು ಪ್ರತಿಯೊಂದು ಜೀವಿಗೂ ನಡೆಯುತ್ತಿರುವ ವಿಷಯವೆ.

ನಾವು ಒಂದು ಊರಿಗೆ ಪ್ರಯಾಣ ಹೊರಟಾಗ ಆ ಊರು ಎಷ್ಟು ದೂರವಿದೆಯೋ, ನಾವು ಎಲ್ಲಿ ಇಳಿಯಬೇಕೋ, ಎಲ್ಲವೂ ಜ್ಞಾಪಕದಲ್ಲಿ ಇಟ್ಟುಕೊಂಡು ಪ್ರಯಾಣ ಮಾಡುತ್ತಾ ಇರುತ್ತೇವೆ. ಗಮ್ಯ ಬಹಳ ದೂರವಾದರೆ ಅದಕ್ಕೆತಕ್ಕ ಖರ್ಚಿಗಾಗಿ ಎಷ್ಟು ಹಣ ಬೇಕಾಗಿದೆಯೋ ಅಷ್ಟೇ ಹತ್ತಿರ

ಇಟ್ಟುಕೊಳ್ಳುತ್ತೇವೆ. ಹಾಗೆ ಆ ಪ್ರಯಾಣದಲ್ಲಿ ಯಾರ ಜೊತೆ ಸ್ನೇಹ ಮಾಡಿದರೂ ಇಳಿದುಹೋಗುವವರೆಗೆ ಮಾತ್ರವೇ ಆ ಸ್ನೇಹ ಇರುತ್ತದೆಂದು ತಿಳಿದು ಅಲ್ಲಿಯವರೆಗೆ ಪರಿಚಯ ಏರ್ಪಡಿಸಿಕೊಳ್ಳುತ್ತೇವೆ. ಇದು ಗಮ್ಯ ತಿಳಿದ ಪ್ರಯಾಣವಾದ್ದರಿಂದ ಈ ಪ್ರಯಾಣದಲ್ಲಿ ಬಂಧಗಳು ಅನುಬಂಧಗಳು ಏನನ್ನೂ ಇಟ್ಟುಕೊಳ್ಳುವುದಿಲ್ಲ.

ಜೀವನ ಪ್ರಯಾಣದಲ್ಲಿ ಮರಣವೆನ್ನುವ **"ಗಮ್ಯ"** ಎಲ್ಲರಿಗೂ ಇದೆಯೆಂದು ತಿಳಿದಿದೆ. ಆದರೆ ಆ ಗಮ್ಯ ಎಷ್ಟು ದೂರವಿದೆ ಎಂಬುವುದು ತಿಳಿದಿಲ್ಲ. ಅದು ಯಾವಾಗ ಬರುವುದು ತಿಳಿಯುವುದಿಲ್ಲ. 50 ಕಿ.ಮೀ ವೇಗವಿರುವ ವಾಹನದಲ್ಲಿ ಪ್ರಯಾಣಿಸಿದರು, ಢಿಲ್ಲಿಗೆ ಹೋಗಬೇಕೆಂದರೆ ಎಂಟು ದಿನಗಳು, ಅಮೇರಿಕಾ ಹೋಗಬೇಕೆಂದರೆ ಒಂದು ತಿಂಗಳು ಪ್ರಯಾಣದ ಕಾಲವೆಂದು ತಿಳಿದರೂ ಸಾಟಿ ಪ್ರಯಾಣಿಕರೊಂದಿಗೆ ಅಂಟಿ ಅಂಟದ ಸ್ನೇಹವನ್ನೇ ಮಾಡುತ್ತೇವೆ. ಆದರೆ ಶರೀರವೆಂಬ ವಾಹನ ಪ್ರಯಾಣ **"ಇಷ್ಟು ಕಾಲವೆಂದು"** ತಿಳಿಯದಿರುವಾಗ ನಮ್ಮ ಸಹ ಪ್ರಯಾಣಿಕರೊಂದಿಗೆ ಪೂರ್ತಿ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವುದು ನಡೆಯುತ್ತದೆ. ನಮ್ಮ ಪ್ರಯಾಣ ದಿನವೋ, ಅರ್ಧ ದಿನವೋ ತಿಳಿಯದಿರುವಾಗ ಬಂಧಗಳನ್ನು ಏರ್ಪಡಿಸಿಕೊಳ್ಳುವು ದರಲ್ಲಿ ಅರ್ಥವಿಲ್ಲ. ಢಿಲ್ಲೀ ಪ್ರಯಾಣ ತಪ್ಪದೆ ವಾರದದಿನಗಳೆಂದು ತಿಳಿದರೂ ಸಾಟಿ ಪ್ರಯಾಣಿಕರೊಂದಿಗೆ ಬಂಧ ಇಟ್ಟುಕೊಳ್ಳುವುದಿಲ್ಲ. ನಮ್ಮ ದೇಹ ಪ್ರಯಾಣ ಕಾಲ ವಾರದ ದಿನಗಳೆಂದೂ ಸಹ ನಂಬಿಕೆ ಇಲ್ಲದಿರುವಾಗ ಬಂಧಗಳು ಏರ್ಪಡಿಸಿಕೊಳ್ಳುವುದು ಜ್ಞಾನರಹಿತವೆಂದು ತಿಳಿಯಬೇಕು. ಜ್ಞಾನಸಹಿತವಾಗಿ ಯೋಚಿಸಿದರೆ ಸಾಟಿ ಪ್ರಯಾಣಿಕರಾಗಿ ಶರೀರಗಳಲ್ಲಿ ಜೀವನ ಸಾಗಿಸುತ್ತಿದ್ದರೂ ಯಾರ ಗಮ್ಯ ಅವರದು. **ಯಾವ ಗಮ್ಯಕ್ಕೆ ಪ್ರಯಾಣವೋ ಅಲ್ಲಿಯವರೆಗೇ ನಿಂತು ಹೋಗುತ್ತದೆ. ನಿನ್ನ ಹಿಂದೆ ಖಚಿತವಾಗಿ ನಿನ್ನ ಗಮ್ಯದವರೆಗೂ ಪ್ರಯಾಣಿಸುವವರು ಯಾರೂ ಇರುವುದಿಲ್ಲ. ಆ ವಿಷಯ ಎಲ್ಲರೂ ಒಪ್ಪಿಕೊಳ್ಳಬೇಕಾಗಿದೆ.** ಆದರೆ ಇದು ಸ್ವಲ್ಪಮಟ್ಟಿಗೆ ವಾಸ್ತವವೇ. ಆದರೆ ನಮಗೆ ತಿಳಿಯದ ವಾಸ್ತವ ಮತ್ತೊಂದು ಇದೆ. ಅದು ಏನೆಂದರೆ ಸಹಜವಾಗಿ ಕಾಣಿಸುವ

ನಿನ್ನೊಂದಿಗೆ ನಿನ್ನ ಸಾಟಿ ಪ್ರಯಾಣಿಕರು ನಿನ್ನ ಗಮ್ಯದವರೆಗು ಬಾರದಿದ್ದರೂ ನಿನಗೆ ಕಾಣಿಸದಂತೆ ನಿನ್ನ ಜೊತೆ ಪ್ರಯಾಣ ಮಾಡುವವರು ಮತ್ತೆ "ಇಬ್ಬರು" ಇದ್ದಾರೆ. ಅವರಲ್ಲಿ ಒಬ್ಬರು ಹೆಸರಿರುವವನು ಮತ್ತೊಬ್ಬನು ಹೆಸರಿಲ್ಲದವನು. ಒಬ್ಬನ ಹೆಸರು **"ಆತ್ಮ"** ಎರಡನೆಯವನಿಗೆ ಹೆಸರಿಲ್ಲ ಆದ್ದರಿಂದ "ಆತ್ಮ"ಕ್ಕೆ ಪರವಾಗಿ (ಬೇರೆಯಾಗಿ) ಇರುವವನು ಎನ್ನುವ ಅರ್ಥದಿಂದ **"ಪರಮಾತ್ಮ"** ಎಂದೂ, ಆತನನ್ನೇ "ಈಶ್ವರನು" (ಅಧಿಪತಿ) ಎಂದು, "ಶಿವ" ಎಂದು, "ದೇವರು" ಎಂದು, ಅನೇಕ ವಿಧಗಳಾಗಿ ಕರೆಯುತ್ತಿದ್ದೇವೆ.

ನೀನು "ಜೀವಾತ್ಮ" ಎಂದು ನಿನಗೂ ಸಹ ತಿಳಿದಿದೆ. ಆದರೆ ನೀನು ಶರೀರದಲ್ಲಿ ಪ್ರಯಾಣಿಸುತ್ತಿದ್ದೀಯೆಂದು ಮರೆತಿದ್ದೀಯಾ. ಮತ್ತೆ ನಿನ್ನ ಜೊತೆ ಸಹ ಎಲ್ಲಾ ಕಾಲದಲ್ಲು ಮತ್ತೆ "ಇಬ್ಬರು" ಇದ್ದಾರೆಂಬುವುದೂ ಸಹ ತಿಳಿದಿಲ್ಲ. ನಿನ್ನ ಶರೀರದಲ್ಲಿ "ಮೂವರು" ಪ್ರಯಾಣಿಸುತ್ತಿದ್ದಾರೆಂಬ ವಿಷಯವೆ ತಿಳಿದಿಲ್ಲ.

ಹಾಗೆಯೇ ಎಲ್ಲ ಜೀವರಾಶಿಗಳ ಶರೀರದಲ್ಲಿಯೂ ಮೂವರ "ಪ್ರಯಾಣ" ನಡೆಯುತ್ತಿದೆ. ಶರೀರದಲ್ಲಿ "ಆತ್ಮ" "ಪರಮಾತ್ಮ"ರೊಂದಿಗೆ ನಿನಗೆ (ಜೀವಾತ್ಮನಿಗೆ) ಇರುವ "ಬಂಧ" ವೇನು? ಅವರೊಂದಿಗೆ ಎಷ್ಟು ಸ್ನೇಹದಿಂದ ಇದ್ದೀಯೆಂದು ಯೋಚಿಸಿದರೆ ಜೀವಾತ್ಮ ಅವರ ಜೊತೆ ಯಾವ ಸಂಬಂಧಗಳು ಇಟ್ಟುಕೊಳ್ಳುವುದಿಲ್ಲ. ಈಗ ಇದು ಓದುವವನಿಗೆ ನಿನಗಿವೆಯಾ! ಅಂದರೆ ಯಾವ ಸಂಬಂಧ ಇಲ್ಲವೆಂದೇ ಹೇಳಬಹುದು. ಇರುವುದೆಲ್ಲ ನಮ್ಮ ಮುಂದೆ ಹೋಗುವವರೊಂದಿಗೋ, ನಮ್ಮ ನಂತರ ಹೋಗುವವರೊಂದಿಗೋ ಸಂಬಂಧಗಳನ್ನು ಇಟ್ಟುಕೊಂಡು, ಅವರೊಂದಿಗೇ ಕಾಲವೆಲ್ಲ ಕಳೆಯುತ್ತಿದ್ದರೆ, ಒಳಗಿನ ಆತ್ಮ, ಪರಮಾತ್ಮರೆನ್ನುವ ಅವರೊಂದಿಗೆ ಸಂಬಂಧಗಳನ್ನು ಏರ್ಪಡಿಸಿಕೊಳ್ಳುವ ಸಮಯ ಸಹನೆ ಯಾರಿಗೂ ಇಲ್ಲ. ನೀನಾಗಲಿ ಯಾರಾಗಲಿ ಒಳಗಿರುವವರ ಕಡೆ ನೋಡದಿದ್ದರೂ ಅವರ ಬಂಧವು ಎಲ್ಲವೇಳೆಗಳಲ್ಲಿ ನಿನ್ನೊಂದಿಗೆ ಇದೆ. ಅವರ ಬಂಧ ಇಲ್ಲದಿದ್ದರೆ ಶರೀರದಲ್ಲಿ ನಾವು ಒಂದು ನಿಮಿಷವೂ ಸಹ ಇರಲಾರೆವು. ಶರೀರ ವಾಹನದಲ್ಲಿ ಜೀವಾತ್ಮ, ಆತ್ಮ, ಪರಮಾತ್ಮಗಳು

ಪ್ರಯಾಣಿಸುತ್ತಾ "ಗಮ್ಯ" ಸೇರುತ್ತಲೇ ಶರೀರ ಬಂಧದಿಂದ ಜೀವಾತ್ಮ ಇಳಿದುಹೋಗುತ್ತಾನೆ. ಆತನೊಬ್ಬನೇ ಅಲ್ಲ ಆತನೊಂದಿಗೆ ಆತ್ಮ ಸಹ ಇಳಿದುಹೋಗುತ್ತದೆ. **ನಿನ್ನೊಂದಿಗೆ ಪ್ರಯಾಣ ಪ್ರಾರಂಭ ಮಾಡಿ ನಿನ್ನೊಂದಿಗೆ ಗಮ್ಯದಲ್ಲಿ ಇಳಿದು ಹೋಗುವವನು ಆತ್ಮ ಒಬ್ಬನೇ.** ಈ ವಿಷಯವನ್ನು ಭಗವದ್ಗೀತೆಯಲ್ಲಿ **"ಪುರುಷೋತ್ತಮ ಪ್ರಾಪ್ತಿ ಯೋಗ"** ಎಂಬ ಅಧ್ಯಾಯದಲ್ಲಿ 8ನೇ ಶ್ಲೋಕದಲ್ಲಿ ಹೇಳಲಾಗಿದೆ.

**ನಿನ್ನ ಗಮ್ಯದಲ್ಲಿ ನಿನ್ನೊಂದಿಗೆ ಪ್ರಯಾಣಿಸುವ ಆತ್ಮ ಪರಮಾತ್ಮರೆನ್ನುವ ಇಬ್ಬರಲ್ಲಿ ಒಬ್ಬರು ಮಾತ್ರ ಇಳಿದು ಹೋಗುತ್ತಿದ್ದಾರೆ. ಪರಮಾತ್ಮ, ಆತ್ಮಗಿಂತಲೂ ಬೇರೆ ಇದ್ದಾನೆ ಆದ್ದರಿಂದ ಪರಮಾತ್ಮ ಹಾಗೆಯೇ ಶರೀರದಲ್ಲಿ ಇರುತ್ತಾನೆ.**

ಸಜೀವಯಾತ್ರೆಯಲ್ಲಿ ಜೀವಿಯು ಸುಖದುಃಖಗಳನ್ನು ಅನುಭವಿಸುತ್ತಿರುವನು. ಆ ಸುಖದುಃಖಗಳ ಅನುಭವಗಳಿಗೆ ಬೇಕಾದ ಕಾರ್ಯಾಚರಣೆಗಳಿಗೆ ಚೈತನ್ಯವನ್ನು ಕೊಟ್ಟು ಶರೀರವನ್ನು ಕದಲಿಸಿದವನು ಆತ್ಮ. ಮೂರನೆಯವನು ಸಾಕ್ಷಿಯಾಗಿ ಎಲ್ಲವನ್ನು ನೋಡುತ್ತಾ ಏನು ಮಾಡದೆ ಮೌನವಾಗಿ ಇರುತ್ತಾನೆ. "ಜೀವಿಯು" ಶರೀರದಲ್ಲಿ ಇದ್ದಾಗ ಮತ್ತು ಇಲ್ಲದಿರುವಾಗ ತಟಸ್ಥವಾಗಿರುವವನು ಮೂರನೆಯವನಾದ **ಶಿವನು ಅಥವಾ ಈಶ್ವರನು ಅಥವಾ ಪರಮಾತ್ಮ**. ಏನೂ ಅಲ್ಲದ ಈ ಮೂರನೆಯವನನ್ನು ಪರಮಾತ್ಮ ಎನ್ನುವುದರಲ್ಲಿ ಅಂತರಾರ್ಥವನ್ನು ತಿಳಿದುಕೊಂಡಿದ್ದೇವಲ್ಲವೆ! ಹಾಗೆಯೇ ಈಶ್ವರನೆಂದು ಏಕೆ ಎನ್ನುತ್ತಿದ್ದೇವೆಯೋ ವಿವರವಾಗಿ ತಿಳಿದುಕೊಳ್ಳೋಣ.

ಅಧಿಪತಿ ಎಂದರೆ ಮೀರಿದವನು, ದೊಡ್ಡವನೆಂದು ಹಿರಿಯನೆಂದು ಅರ್ಥವಾಗುತ್ತಿದೆ. ಹಾಗೆಯೇ ಲಕ್ಷಾಧಿಪತಿ ಎಂದರೆ ಲಕ್ಷಕ್ಕೆ ಅಧಿಪತಿ ಎಂದೂ, ಲಕ್ಷಕ್ಕೆ ಮೀರಿದವನೆಂದೂ, ಲಕ್ಷ ಇರುವವನೆಂದೂ ಅರ್ಥವಾಗುತ್ತದೆ. ಆ ವಿಧವಾಗಿ ಲಕ್ಷಾಧೀಶ್ವರ, ಕೋಟ್ಯಾದೀಶ್ವರ ಎನ್ನುವುದರಲ್ಲಿ ಕೋಟಿಗೆ, ಲಕ್ಷಕ್ಕೆ ಅಧಿಪತಿ ಎಂದು ಅವುಗಳಿಗಿಂತಲೂ ದೊಡ್ಡವನೆಂದು ತಿಳಿಯುತ್ತಿದೆ. ಈ ಪ್ರಪಂಚದಲ್ಲಿ

ಲಕ್ಷ, ಕೋಟಿ, ಅದು, ಇದು ಎನ್ನದಂತೆ ಎಲ್ಲದಕ್ಕೂ ಸಮಸ್ತಕ್ಕೆಲ್ಲ ಅಧಿಪತಿಯಾದವನು "ಪರಮಾತ್ಮ" ಒಬ್ಬನೇ. ಆದ್ದರಿಂದ ಇಂತಹದಕ್ಕೆ ಈಶ್ವರನನ್ನದಂತೆ ಒಟ್ಟಾರೆ ಏಕೈಕ ಪದವಾಗಿ ಈಶ್ವರನು ಎನ್ನುವುದು ನಡೆದಿದೆ. ಎಲ್ಲಿಯೂ ಗುರುತಿಸದಿರುವುದನ್ನು, ಎಲ್ಲಾಕಡೆ ಇರುವುದನ್ನು, ಯಾವುದಕ್ಕು ತಿಳಿಯದೆ ಇರುವುದನ್ನು, ಬದುಕಿರುವವನಿಗೂ, ಜ್ಞಾನಿಗಳಿಗೂ, ಯೋಗಿಗಳಿಗೂ ಸಹ ತಿಳಿಯದೆ ಇರುವುದು, ಅಗಮ್ಯ ಗೋಚರವಾದುದು, ಆದ್ದರಿಂದ ಅದನ್ನು **"ಶಿವ"** ಎಂದು ಹೆಸರು ಇಟ್ಟಿದ್ದೇವೆ. ಶಿವ ಎಂದರೆ ತಿಳಿಯದಿರುವುದೆಂದು ಅರ್ಥ. ಜ್ಞಾನಿಗಳಿಗೆ ಯೋಗಿಗಳಿಗೆ "ಶಿವ" ಎನ್ನುವುದು ಒಂದು ಇದೆಯೆಂದು ತಿಳಿದಿದೆ. ಅದು ಯಾವುದೆಂದು ಮಾತ್ರ ತಿಳಿದಿಲ್ಲ. ಜೀವಿಯು ಜ್ಞಾನಯೋಗದಿಂದ ಶರೀರದಲ್ಲಿರುವ ಆತ್ಮವನ್ನು ತಿಳಿಯಬಹುದು, ಆದರೆ "ಶಿವ" ಎಂಬುವುದನ್ನು ಮಾತ್ರ ತಿಳಿಯಲಾರನು. ಕರ್ಮ ಮುಗಿದ ನಂತರ ಜನ್ಮವಿಲ್ಲದ ಸ್ಥಿತಿಯನ್ನು ಸೇರುವ ಯೋಗಿಗಳು "ಶಿವ"ನಲ್ಲಿ ಐಕ್ಯವಾಗಿ ಹೋಗುತ್ತಾರೆ. ಅದೇನೋ ಆಗಲೇ ತಿಳಿಯುತ್ತದಾಗಲಿ ಮೊದಲೇ ತಿಳಿಯುವುದಿಲ್ಲ.

ಶರೀರವೆಂಬ ಜೀವಯಾತ್ರೆಯಲ್ಲಿ "ಮರಣವೆಂಬ ಗಮ್ಯದಲ್ಲಿ ಆತ್ಮ, ಜೀವಾತ್ಮಗಳು ಶರೀರದಿಂದ ನಿಷ್ಕ್ರಮಿಸಿದಾಗ ಕೊನೆಗೆ ಶರೀರದಲ್ಲಿ ಉಳಿಯುವುದು ಶಿವ". ಬದುಕಿರುವಾಗ ನೀಚವಾದ ಗುಣಗಳಿಂದ ಸಂಬಂಧ ಇರುವ "ಜೀವಿಯು" ಶರೀರದಲ್ಲಿ ಇಲ್ಲ. ಜೀವಿಯು ಆತ್ಮವಿಲ್ಲದ ಶರೀರದಲ್ಲಿ ಯಾವ ನೀಚ ಭಾವನೆಗಳು ಇಲ್ಲ. ಆಗ ಅದು ಶುದ್ಧ "ಶಿವ" ನಿಲಯ. ಪರಮಾತ್ಮ ಹೊರತು ಮತ್ತ್ಯಾರು ಇರುವುದಿಲ್ಲ. ಆದ್ದರಿಂದ ಆ ವಿಷಯ ತಿಳಿದ ಜ್ಞಾನಿಗಳು ಒಬ್ಬ ವ್ಯಕ್ತಿ ಮರಣಿಸಿದ ನಂತರ ಆ ಶರೀರಕ್ಕೆ ಅಂತ್ಯಕ್ರಿಯೆಗಳ ಮೊದಲೆ ಪೂರ್ತಿ ಭಕ್ತಿಯಿಂದ ಪೂಜಿಸುತ್ತಿದ್ದರು. ಮೃತದೇಹಕ್ಕೆ ದೈವ ಸಂಬಂಧಗಳಾದ ವಿಭೂತಿ ನಾಮಗಳಿಂದ ಅಲಂಕರಿಸಿ, ಗೋವಿಂದ ನಾಮಸ್ಮರಣೆಯಿಂದ ಪೂಜಿಸಿ, ಎಲ್ಲರನ್ನೂ ಮುಗಿಯಿರಿ ಎನ್ನುತ್ತಿದ್ದರು. ಅಂತಹ ಸಾಂಪ್ರದಾಯ ಇಂದಿಗೂ ಇದ್ದರೂ ಅದು ಅರ್ಥ

ತಿಳಿಯದ ಆಚಾರವಾಗಿದೆ. ಈಗ ಮುಗಿಯುವವರು ಭಕ್ತಿ ಯಿಂದಲ್ಲದೆ ಭಯದಿಂದ ಮುಗಿಯುತ್ತಿದ್ದಾರೆ. ಒಂದುವೇಳೆ ಮುಗಿಯದಿದ್ದರೆ ಮರಣಿಸಿದವರು ಮತ್ತೆ ದೆವ್ವವಾಗಿ ಬರುತ್ತಾರೆಂದು, ಅವನ ಪೀಡೆ ಮನೆ ಸುತ್ತಾ ಇರುತ್ತದೆಂದು, ಕೈ ಮುಗಿದರೆ ಅವನ ಪೀಡೆ ಅಷ್ಟಕ್ಕೆ ಹೋಗುತ್ತದೆ ಎಂದು ಮುಗಿಯುತ್ತಿದ್ದಾರೆ.

ಪೂರ್ವಕಾಲದಲ್ಲಿ ಹಾಗೆ ಮಾಡಲಿಲ್ಲ. ಅವರು ಪ್ರತಿ ಕೆಲಸವನ್ನು ಅರ್ಥ ತಿಳಿದು ಮಾಡುತ್ತಿದ್ದರು. ಜೀವಿಯು ಹೋದ ನಂತರ ಶರೀರದಲ್ಲಿ ಕೊನೆಗೆ ಉಳಿದಿರುವುದು "ಶಿವ" ಎಂದು ಅವರಿಗೆ ತಿಳಿದಿತ್ತು. ಆದ್ದರಿಂದ ಮರಣಿಸಿದ ಶರೀರವನ್ನು (ಮೃತದೇಹವನ್ನು) "ಶಿವ" ಎಂದು ಕರೆಯುತ್ತಿದ್ದರು. ಕಾಲಕ್ರಮೇಣ ಭಾವ ಹೋಗಿದೆ. ಕೊನೆಗೆ "ಶಿವ" "ಶವ" ಎನ್ನುವ ಹೆಸರಾಗಿ ಬದಲಾಗಿಹೋಗಿದೆ. ಶಿವ ಶವ ಆದರೂ ಪೂರ್ವದಿಂದ ಇರುವ ಪೂಜೆಗಳು ಮೊದಲಾದ ಆಚರಣೆಗಳು ಹಾಗೆಯೇ ಇವೆ. ಆದ್ದರಿಂದ ಅದರ ನಿಜವಾದ ಅರ್ಥ ಈದಿನ ಮಾಸಿಹೋಗಿದೆ ಎಂದು ತಿಳಿಯುತ್ತದೆ.

ಕರ್ಮ ನಿಶ್ಶೇಷವಾಗಿ ಮುಗಿದ ಯೋಗಿಗಳು ಮರುಜನ್ಮಕ್ಕೆ ಹೋಗದೆ ಮೂರನೆಯ ಪುರುಷನಾದ ಪರಮಾತ್ಮನಲ್ಲಿ ಐಕ್ಯವಾಗಿ ಹೋಗುತ್ತಾರೆ. ಅಂತಹವರು ಮರಣಿಸುವ ಸಮಯದಲ್ಲಿ ತಮ್ಮ ಶರೀರವನ್ನು ಬಿಟ್ಟುಹೋಗುವುದಿಲ್ಲ. ಶರೀರದಲ್ಲಿಯೇ ಇರುವ ಶಿವನೊಳಗೆ ಐಕ್ಯವಾಗಿ ಹೋಗುತ್ತಾರೆ. ಅಂತಹವರ ಶರೀರವನ್ನು ಕೊನೆಯ ದಿನದಲ್ಲಿ ಪೂಜೆ ಮಾಡುವುದಲ್ಲದೆ ಸಮಾದಿಯಲ್ಲಿಟ್ಟು ಚಿರಕಾಲ ಪೂಜೆಗಳು ಮಾಡುವುದು ಸಹ ಹಿರಿಯರ ನಿರ್ಣಯವೆ. ಹಾಗೆ ಮಾಡುವುದರಿಂದ ಸಾಕ್ಷಾತ್ತು ಪರಮಾತ್ಮನನ್ನೇ ಆರಾಧಿಸಿದಷ್ಟು ಫಲಿತವಿರುತ್ತದೆಂದು ಅವರಿಗೆ ತಿಳಿದಿತ್ತು.

ಶವ ವಿಷಯದಲ್ಲಿ ಈಗ ನಾವು ಸ್ವಲ್ಪ ತಿಳಿದುಕೊಂಡಿದ್ದೇವೆ. ಅದು ಶವ ಅಲ್ಲ, ಶಿವ ಎಂದು ನಿಜ ತಿಳಿದಿದೆ. ಆದ್ದರಿಂದ ಶವವನ್ನು ಶುಭ ಸೂಚಕವಾಗಿ ಭಾವಿಸಬೇಕು. ಎಲ್ಲರಂತೆ ಪೀಡೆ, ಪಿಶಾಚಿ ಅಂದುಕೊಳ್ಳಬಾರದು. ಯಾವ

ಪೂಜೆ ವಿಧಾನದಲ್ಲಿ ಪಾಲ್ಗೊಳ್ಳದಿದ್ದರೂ ಪರವಾಗಿಲ್ಲ. ಶವವನ್ನು "ಶಿವ"ವಾಗಿ ನೋಡಿರಿ. ಅಂತ್ಯಕ್ರಿಯೆಗಳು ಮಾಡದವರಿಗೆ ಸಹಾಯ ಮಾಡಿರಿ. ಮುಸ್ಲಿಂ ಮತದಲ್ಲಿ ಏನು ತಿಳಿಯದವರಾದರೂ ಶವವನ್ನು ನೋಡುತ್ತಲೆ ಕೆಲಸಗಳನ್ನೆಲ್ಲ ಬಿಟ್ಟುಹೋಗಿ ಪೋಟಿಬಿದ್ದು ಶವಪೆಟ್ಟಿಗೆ ಹೊರುವುದನ್ನು ನೋಡಿಯೇ ಇರುತ್ತಾರೆ. ಅದೇ ಕ್ರಿಶ್ಚಿಯನ್ ಮತದಲ್ಲಾದರೆ ಮತ ಗುರುವು ಬೈಬಲ್ ಓದುತ್ತಾ ಭಕ್ತಿಯಿಂದ ಅಂತ್ಯಕ್ರಿಯೆಗಳು ಮಾಡುವುದು ನೋಡುತ್ತಲೆ ಇದ್ದೇವೆ. ಎಲ್ಲದಕ್ಕಿಂತ ಮೊದಲು ಹುಟ್ಟಿರುವ (ಇಂದೂ) ಹಿಂದೂಮತದಲ್ಲಿ ನಾಮಮಾತ್ರದ ಆಚಾರದಿಂದ ಮನೆಯವರೆ ಇಷ್ಟವಿಲ್ಲದೆ ಹೋದರೂ ಮೃತದೇಹಕ್ಕೆ ಸ್ನಾನ ಮಾಡಿಸಿ ಬೊಟ್ಟು ಇಟ್ಟು ಕಳುಹಿಸುತ್ತಿದ್ದಾರೆ. ಅರ್ಥ ತಿಳಿಯದ ಆಚಾರದಿಂದ ಪೂಜೆಮಾಡುತ್ತಾ "ಶಿವ"ವನ್ನು ಶವ ಎನ್ನುತ್ತಿರುವವರೆಲ್ಲರೂ ಶವವನ್ನು ಶಿವವಾಗಿ ನೋಡಿ ನಿಜವಾದ ಭಕ್ತಿಯಿಂದ ಸತ್ತುಹೋದವನಿಗಲ್ಲ ಅವನಲ್ಲಿರುವ ದೇವರಿಗೆ ಎನ್ನುವ ಭಾವನೆ ಯಿಂದ ಅಂತ್ಯಕ್ರಿಯೆಗಳು ಮಾಡಬೇಕು. ಮರಣಿಸಿದವರು ಯೋಗಿಯಾದರೆ ಅಂತಹ ಶರೀರ ಸಿಗುವುದೇ ಅದೃಷ್ಟವೆಂದುಕೊಂಡು ಪ್ರತ್ಯೇಕವಾದ ಸ್ಥಳದಲ್ಲಿ ಸಮಾಧಿ ಮಾಡಿ ನಿತ್ಯ ಪೂಜೆಗಳು ಮಾಡುವುದು ಬಹಳ ಒಳ್ಳೆಯದು. ಅಂತಹ ಶರೀರ ಸಮಾಧಿ ದೈವಶಕ್ತಿ ನಿಲಯವಾಗಿರುತ್ತದೆ. ಆ ಸಮಾಧಿಯನ್ನು ಪೂಜಿಸಿ ಕೊಳ್ಳುವವರ ಕರ್ಮಗಳು ಸುಟ್ಟುಹೋಗುತ್ತಿರುತ್ತವೆ.



## ಭಾರ ಇಳಿಸುವುದು

ಶವವನ್ನು ಶಿವ ಆಗಿ ಭಾವಿಸಿ ಪೂಜಿಸಿ ಗೋವಿಂದ ನಾಮಸ್ಮರಣೆ ಯಿಂದ ಸ್ಮಶಾನದ ಬಳಿಗೆ ತೆಗೆದುಕೊಂಡು ಹೋಗುವುದು ಪೂರ್ವದಲ್ಲಿ ನಡೆಯುತ್ತಿತ್ತೆಂದು ತಿಳಿದುಕೊಂಡಿದ್ದೇವೆ. ನಿತ್ಯವೂ ನಮ್ಮ ಮುಂದಿರುವ ವ್ಯಕ್ತಿ ಅಕಸ್ಮಾತ್ತಾಗಿ ಮರಣ ಹೊಂದುವುದರಿಂದ, ಆ ವ್ಯಕ್ತಿಯನ್ನು ಒಂದು ಬಾರಿ ಶವವಾಗಿ ನೋಡುವುದರಿಂದ, ಆ ಶರೀರವನ್ನು ನೋಡಿ ಇಂತಹ ವ್ಯಕ್ತಿ

ಎಂದು ಅಂದುಕೊಳ್ಳುತ್ತಾರೆ ಹೊರತು ಉನ್ನತವಾದ ಶಿವವಾಗಿ ಕೆಲವರು ಹೋಲಿಸಿಕೊಳ್ಳಲಾರರು. ಅಂತಹವರು ಸತ್ತು ಹೋದ ವ್ಯಕ್ತಿಯ ಮೇಲಿರುವ ಮೋಹ ಗುಣದಿಂದ ನನ್ನ ಮಗನೆಂದು ಕೆಲವರು, ನನ್ನ ತಮ್ಮನೆಂದು ಕೆಲವರು, ನನ್ನ ಬಂಧುವೆಂದು ಕೆಲವರು ದುಃಖಿಸುತ್ತಲೇ ಇರುತ್ತಾರೆ. ಮಮಕಾರ ಬಿಡದ ಮಾನವರು ತಮ್ಮ ಗುಣಗಳಿಂದ ಕಳೆದುಹೋದ ವಿಷಯಗಳನ್ನು ಜ್ಞಾಪಕ ತಂದುಕೊಂಡು ರೋಧಿಸುತ್ತಲೇ ಇರುತ್ತಾರೆ. ಮೃತದೇಹವನ್ನು ಸಾಂಪ್ರದಾಯದ ಪ್ರಕಾರ ಶಿವವಾಗಿ ತಿಳಿದು ಅಲಂಕರಿಸಿ, ಪೂಜಿಸಿ, ನಮಸ್ಕರಿಸಿ ಶವಯಾತ್ರೆ ಮಾಡುತ್ತಿದ್ದರೂ ಕೆಲವರಿಗೆ ಹೋದವರ ಮೇಲೆ ಮಮಕಾರ ಬಿಡದೆ ಮೃತದೇಹವನ್ನು ದೊಡ್ಡ ಭಾವನೆಯಿಂದ ನೋಡದಂತಿದ್ದಾರೆ. ಸ್ಮಶಾನದವರೆಗೂ ತೆಗೆದುಕೊಂಡು ಹೋಗುವ ದಾರಿಯಲ್ಲಿ ಒಂದು ಕಡೆ ಮೃತದೇಹವನ್ನು ಇಳಿಸಿ ಮತ್ತೆ ಹೊತ್ತುಕೊಂಡು ಹೋಗುವುದು ಇದೆ. ಹಾಗೆ ಒಂದು ಕಡೆ ಇಳಿಸುವ ಸ್ಥಳವನ್ನು **"ಭಾರ ಇಳಿಸುವುದು"** ಎಂದು ಹೇಳುತ್ತಾರೆ. ಮನೆಯಿಂದ ಭಾರ ಇಳಿಸುವ ಸ್ಥಳದವರೆಗೂ ಶವಯಾತ್ರೆ ಒಂದು ಭಾಗವಾಗಿ, ನಂತರ ಭಾರ ಇಳಿಸಿದ ಸ್ಥಳದಿಂದ ಸ್ಮಶಾನದವರೆಗೂ ಒಂದು ಭಾಗವಾಗಿ ತಿಳಿಯುತ್ತಿದ್ದರು. ಹೋದ ವ್ಯಕ್ತಿಯ ಮೇಲೆ ಮಮಕಾರ ಬಿಡದ ಮನುಷ್ಯರು ಭಾರ ಇಳಿಸುವ ಸ್ಥಳದವರೆಗೂ ಬರುತ್ತಿದ್ದರು. ಭಾರ ಇಳಿಸಿದ ಸ್ಥಳದಲ್ಲಿ ಶವವನ್ನು ಇಳಿಸಿ ಮುಖಕ್ಕೆ ಕಟ್ಟಿರುವ ಬಟ್ಟೆ ತೆಗೆದು ಎಲ್ಲರನ್ನೂ ನೋಡಿರೆಂದು ಹೇಳುತ್ತಿದ್ದರು. ಐದು ನಿಮಿಷಗಳು ನೋಡಿದ ನಂತರ ಹಾಗೆಯೇ ಮುಚ್ಚಿಟ್ಟು ಉಳಿದ ಶವಯಾತ್ರೆಯನ್ನು ಸಾಗಿಸುತ್ತಿದ್ದರು. ರೋಧಿಸುತ್ತಿರುವವರು ಭಾರ ಇಳಿಸುವ ಸ್ಥಳದವರೆಗೂ ಮಾತ್ರವೇ ಬರುತ್ತಿದ್ದರು. ನಂತರ ಭಾಗದಲ್ಲಿ ಅವರು ಪಾಲ್ಗೊಳ್ಳದೆ ಮನೆಗೆ ಹೋಗುತ್ತಿದ್ದರು.

ಶವವನ್ನು ಪೂರ್ತಿ ಶಿವವಾಗಿ ತಿಳಿದು, ಮಮಕಾರ ಬಿಟ್ಟು, ಮನಸ್ಸಿನಲ್ಲಿ ಪೂರ್ತಿ ದೈವವಾಗಿ ತಿಳಿದವರು ಮಾತ್ರವೇ ಭಾರ ಇಳಿಸುವ ಸ್ಥಳದ ನಂತರ ಶವಯಾತ್ರೆಯಲ್ಲಿ ಭಾಗವಹಿಸುತ್ತಿದ್ದರು. ಶವವನ್ನು ಮಧ್ಯದಲ್ಲಿ ಇಳಿಸಿ ಮತ್ತೆ

ಎತ್ತಿಕೊಳ್ಳುವ ಜಾಗವನ್ನು **“ಭಾರ ಇಳಿಸುವ ಸ್ಥಳ**"ವೆಂದು ಹೆಸರಿಡುವುದರಲ್ಲಿ ಪೂರ್ವದಲ್ಲಿ ಒಂದು ಅರ್ಥವಿರುತ್ತಿತ್ತು. ಹೊಲದಲ್ಲಿ ಬೆಳೆದ ಬೆಳೆ ತೆನೆಗಳ ರೂಪದಲ್ಲಿರುತ್ತದೆ. ತೆನೆಗಳ ರೂಪದಲ್ಲಿರುವ ಬೆಳೆ ಕಾಳುಗಳ ರೂಪಕ್ಕೆ ಬದಲಾಗುವುದು ಕಣದಲ್ಲಿಯೇ. ಕಾಳು ತೆನೆಗೆ ಅಂಟಿಕೊಂಡಿರುವವರೆಗೂ ತೆನೆಯ ಅಧೀನದಲ್ಲಿಯೇ ಇರುತ್ತದೆ. ತೆನೆಯಲ್ಲಿನ ಪೊರೆಗಳಿಗೆ ಅಂಟಿಕೊಂಡಿರುವ ಕಾಳು ಪೊರೆಯಿಂದ ಕಣದಲ್ಲಿ ಬೇರೆ ಮಾಡಲಾಗುತ್ತದೆ. ಒಂದು ಸಲ ಬೇರೆ ಮಾಡಲ್ಪಟ್ಟ ಕಾಳು ಮತ್ತೆ ಎಂದಿಗೂ ತೆನೆಯ ಅಧೀನದೊಳಗೆ ಹೋಗುವುದಿಲ್ಲ, ಅದರ ಪೊರೆಗಳಲ್ಲಿ ಸಿಕ್ಕಿಕೊಳ್ಳುವುದಿಲ್ಲ. ಒಂದು ಕಾಳು ತನ್ನೊಂದಿಗೆ ಇರುವ ಎಷ್ಟೋ ಕಾಳುಗಳಲ್ಲಿ ತೆನೆಯಲ್ಲಿ ಸಿಕ್ಕಿಕೊಂಡಿರುತ್ತದೆ. ಕಣದಲ್ಲಿ ಗುಂಡಿನ ಕೆಳಗೆ ತೆನೆಯ ಪೊರೆ ಹೋದಾಗ ಆ ಪೊರೆಯಿಂದ ಕಾಳು ಹೊರಬೀಳಲ್ಪಡುತ್ತದೆ. ಹಾಗೆ ಹೊರಬಿದ್ದ ಕಾಳು ಮತ್ತೆ ತೆನೆಯೊಳಗೆ ಸೇರುವುದಿಲ್ಲವೆಂದು ಎಲ್ಲರಿಗೂ ತಿಳಿದ ವಿಷಯವೇ. ಹಾಗೆಯೇ ತೆನೆ ಎಂಬ ಕರ್ಮ ಪೊರೆಗಳಲ್ಲಿ ಜೀವಿಯು ಸಿಲುಕಿಕೊಂಡಿದ್ದಾನೆಂದು ತಿಳಿಸುವ ಸಲುವಾಗಿ ಪೂರ್ವದಲ್ಲಿ ಹಿರಿಯರು ಕಾಳಿನ ತೆನೆಯನ್ನು ತೋರಿಸಿದ್ದಾರೆ. ಕರ್ಮದಿಂದ ಬಿಡುಗಡೆಯಾದ ಜೀವಿಯು ಪುನಃ ಕರ್ಮದಲ್ಲಿ ಸಿಕ್ಕಿಕೊಳ್ಳದೆ ಸ್ವತಂತ್ರನಾಗಿ ಹೋಗುತ್ತಾನೆಂದು ತಿಳಿಸುವ ಸಲುವಾಗಿ ಕಣವನ್ನು ಉದಾಹರಣೆಯಾಗಿ ತೋರಿಸಿದ್ದಾರೆ.

ಪೂರ್ವದಲ್ಲಿ ಜ್ಞಾನದಿಂದ ಕರ್ಮವನ್ನು ನಿಶ್ಶೇಷವಾಗಿ ಇಲ್ಲದಂತೆ ಮಾಡಿಕೊಂಡವರು ಮರಣಿಸಿದಾಗ, ಆತನು ಮೋಕ್ಷ ಹೊಂದಿದ್ದಾನೆಂದು ಮತ್ತೆ ಜನ್ಮಕ್ಕೆ ಬರುವುದಿಲ್ಲವೆಂದು ತಿಳಿದ ಹಿರಿಯರು ಶವಯಾತ್ರೆಯಲ್ಲಿ ಭಾರ ಇಳಿಸುವ ಸ್ಥಳವೆಂದು ಹೆಸರಿಟ್ಟು ಒಂದು ಕಡೆ ಇಳಿಸುತ್ತಿದ್ದರು. ಹಾಗೆ ಇಳಿಸಿ ನಂತರ ಹೊತ್ತುಕೊಂಡು ಹೋಗುವುದರಿಂದ ಮರಣಿಸಿದ ವ್ಯಕ್ತಿ ಮತ್ತೆ ಜನ್ಮಕ್ಕೆ ಬರುವುದಿಲ್ಲವೆಂದು, ಆತನು **ಕರ್ಮವೆಂಬ ತೆನೆಯಿಂದ ಯೋಗವೆಂಬ ಕಣದಿಂದ ಬಿಡುಗಡೆಯಾಗಿದ್ದಾನೆಂದು ಎಲ್ಲರಿಗೂ ತಿಳಿಸುತ್ತಿದ್ದರು**. ಅಲ್ಲಿಯವರೆಗೂ ಆತನಿಗೋಸ್ಕರ ಯಾರಾದಾರೂ ರೋಧಿಸುತ್ತಿದ್ದರೆ ಆ ಕೆಲಸದಿಂದ ಆತನು

ದೇವರಾಗಿ ಹೋಗಿದ್ದಾನೆಂದು, ಆತನ ಮೇಲೆ ಪ್ರಪಂಚ ಸಂಬಂಧವಾದ ಮಮಕಾರಗಳು ಇರಬಾರದೆಂದು ತಿಳಿಸುತ್ತಿದ್ದರು. ಭಾರ ಇಳಿಸುವ ಸ್ಥಳದವರೆಗೂ ಯಾರಾದರು ಅತ್ತರೂ ಪರವಾಗಿಲ್ಲ ಆದರೆ ಭಾರ ಇಳಿಸಿದ ಸ್ಥಳದ ನಂತರ ಯಾರು ಅಳಬಾರದು. ಅಲ್ಲಿಯವರೆಗೂ ಬೇರೆ ಭಾವವಿದ್ದರು ಆಗಿನಿಂದ ಪೂರ್ತಿ ಭಾವ ಬದಲಾವಣೆ ಹೊಂದಿ ಶವವನ್ನು ಶಿವವಾಗಿ ಭಾವಿಸಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ಅಳುವವರು ಅಲ್ಲಿಂದ ಹಿಂದಕ್ಕೆ ಬರುತ್ತಿದ್ದರು. ನಂತರ ಶಿವ ಎಂಬ ಭಾವನೆ ಹೊಂದಿದವರು ಮಾತ್ರ ಸ್ಮಶಾನದವರೆಗೂ ಹೋಗಿ ಮುಕ್ತಿ ಹೊಂದಿದವನ ಶರೀರವನ್ನು ಭೂಸ್ಥಾಪಿತ ಮಾಡುತ್ತಿದ್ದರು.

ಭಾರ ಇಳಿಸುವ ಸ್ಥಳವೆಂದು ಹೆಸರಿಟ್ಟಿರುವ ಸ್ಥಳವು ಪ್ರತ್ಯೇಕವಾಗಿರುವುದಿಲ್ಲ. ಮಧ್ಯದಲ್ಲಿ ಎಲ್ಲಾದರು ಒಂದು ಕಡೆ ಇಳಿಸಿ ಅದರ ಅರ್ಥವನ್ನು ಇತರರಿಗೆ ತಿಳಿಸಿ ಪುನಃ ಹೊತ್ತುಕೊಂಡು ಹೋಗುತ್ತಿದ್ದರು. ಈ ಪದ್ಧತಿ ಮೋಕ್ಷ ಹೊಂದಿದ ಒಬ್ಬ ಯೋಗಿಗಳಿಗೆ ಮಾತ್ರವೆ ಮಾಡುವ ಸಂಪ್ರದಾಯವಿತ್ತು. ಹಾಗೆ ಮಾಡುವುದರಿಂದ ಯೋಗಿಗಳ ಬೆಲೆ, ಮೋಕ್ಷದ ಪದ್ಧತಿ ಇತರರಿಗೆ ತಿಳಿಯುತ್ತಿತ್ತು. ಭಾರ ಇಳಿಸುವ ಒಂದು ಸಂಪ್ರದಾಯ ಯೋಗಿಗಳಿಗೆ ಹೊರತು ಇತರರಿಗೆ ಮಾಡಬಾರದು. ಇತರರು ಕರ್ಮಬಂಧದಲ್ಲಿ ಇರುವವರೇ ಆದ್ದರಿಂದ ಕಣಕ್ಕೆ ಬಾರದ ತೆನೆಗಳಿಗೆ ಸಮಾನ. ಈ ಕಾಲದಲ್ಲಿ ಭಾರ ಇಳಿಸುವ ಸ್ಥಳದ ಸಾಂಪ್ರದಾಯವು ಕೆಲವು ಪ್ರಾಂತಗಳಲ್ಲಿ ಇದೆ. ಭಾರ ಇಳಿಸುವ ಸ್ಥಳವೆಂದು ಹೆಸರಿಟ್ಟು ಯೋಗಿಗಳಲ್ಲದ ಸಾಮಾನ್ಯ ಪ್ರಜೆಗಳನ್ನು ಸಹ ಇಳಿಸಿ ಎತ್ತುತ್ತಿದ್ದಾರೆ. ಹಾಗೆ ಮಾಡುವುದರಲ್ಲಿ ಭಾರ ಇಳಿಸುವ ಉದ್ದೇಶ ಕೆಟ್ಟುಹೋಗಿ ಅರ್ಥ ಇಲ್ಲದಂತಾಗಿದೆ. ಕೆಲವು ಪ್ರದೇಶಗಳಲ್ಲಿ ಯೋಗಿಗಳಿಗೂ ಸಹ ಭಾರ ಇಳಿಸುವುದು ಇಲ್ಲ. ಇದಕ್ಕೆಲ್ಲಾ ಕಾರಣ ಸಾಂಪ್ರದಾಯಗಳಲ್ಲಿರುವ ಭಾರ ಇಳಿಸುವ ಸಾಂಪ್ರದಾಯ ತಿಳಿಯದೆ ಹೋಗಿರುವುದೇ ಎಂದು ತಿಳಿಯುತ್ತಿದೆ. ಈಗ ತಿಳಿದುಕೊಂಡಿದ್ದೇವಲ್ಲವೆ! ಇಂದಿನಿಂದಾದರು ಸಾಂಪ್ರದಾಯವನ್ನು ಸಕ್ರಮವಾಗಿ

ಆಚರಿಸಿ ಮರಣಿಸಿರುವುದು ಮೋಕ್ಷ ಹೊಂದಿದ ಯೋಗಿಗಳಾದರೆ ಮಧ್ಯದಲ್ಲಿ ಇಳಿಸುವುದು, ಯೋಗಿಗಳು ಅಲ್ಲದಿದ್ದರೆ ಇಳಿಸದಂತೆ ಹೊತ್ತುಕೊಂಡು ಹೋಗುವುದು ಮಾಡಬೇಕು.



## ಪಿಂಡ ಕೂಳು (ಕರ್ಮಕಾಂಡ)

ಪಿಂಡಕೂಳು ಎಂಬ ಮಾತು ಬಹುಶಃ ಎಲ್ಲರೂ ಕೇಳಿಯೇ ಇರುತ್ತೇವೆ. ಇದನ್ನು ಕುರಿತು ನಮಗೆ ತಿಳಿದಿರುವುದು ಏನೆಂದರೆ! ಒಬ್ಬ ಮನುಷ್ಯ ಮರಣಿಸಿದರೆ ಕರ್ಮತಂತ್ರಗಳೆಂಬ ಹೆಸರಿನಿಂದ ಮರಣಿಸಿದವನ ಹಸಿವನ್ನು ತೀರಿಸಲು ಇಡುವ ಆಹಾರವನ್ನು ಪಿಂಡ ಕೂಳು ಎಂದು ಹೇಳುತ್ತಿರುತ್ತಾರೆ. ಒಂದೊಂದು ಪ್ರಾಂತದಲ್ಲಿ ಒಂದೊಂದು ವಿಧವಾಗಿ ಈ ಕರ್ಮತಂತ್ರಗಳನ್ನು ಬ್ರಾಹ್ಮಣರಿಂದ ಮಾಡಿಸುತ್ತಿದ್ದಾರೆ. ಕೆಲವರು ಮನುಷ್ಯ ಸತ್ತುಹೋದ ಮೂರು ದಿನಗಳಿಗೆ, ಹನ್ನೊಂದು ದಿನಗಳಿಗೆ, ಒಂದು ವರ್ಷಕ್ಕೆ ಪಿಂಡ ಕೂಳು ಹಾಕುವುದನ್ನು ಮಾಡುತ್ತಿದ್ದಾರೆ. ಕೆಲವರು ತಿಂಗಳಿಗೊಂದು ಬಾರಿ ಮಾಸಿಕ ಕರ್ಮಗಳೆಂಬ ಹೆಸರಿನಿಂದ ಪಿಂಡ ಕೂಳು ಇಡುವುದು ಸಹ ನಡೆಯುತ್ತದೆ. ಮತ್ತೆ ಕೆಲವರು ವರ್ಷಕ್ಕೆ ಒಂದು ಬಾರಿ ಪುಣ್ಯ ಕ್ಷೇತ್ರಗಳಲ್ಲಿ ತರ್ಪಣವೆಂದು, ತಿಥಿಯೆಂದೂ ವಿಧವಿಧವಾದ ಹೆಸರುಗಳಿಂದ ಈ ಕಾರ್ಯವನ್ನು ಮಾಡುತ್ತಿದ್ದಾರೆ. ಈ ವಿಷಯವನ್ನು ಕುರಿತು ಕೆಲವರನ್ನು ಕೇಳಿದಾಗ ಅವರು ಹೇಳುವ ಸಮಾಧಾನವೇನೆಂದರೆ! ಸತ್ತು ಹೋದವನನ್ನು ಯಮಧೂತರು ಜೊತೆಗೆ ಕರೆದುಕೊಂಡು ಹೋಗುತ್ತಿದ್ದಾರೆಂದು, ಹಾಗೆ ವರ್ಷವೆಲ್ಲಾ ಅವರನ್ನು ನಡೆಸುತ್ತಾ ಕರೆದುಕೊಂಡು ಹೋಗುವುದರಿಂದ ಆ ಜೀವಿಯು ಹಸಿವಿನಿಂದ ಬಾಧೆ ಬೀಳುತ್ತಿದ್ದಾನೆಂದೂ, ತಿಂಗಳಿಗೊಂದು ಬಾರಿ ಕೂಳು ಹಾಕುವುದರಿಂದ ಅವನ ಹಸಿವು ತೀರುವುದೆಂದು ಹೇಳುತ್ತಿದ್ದಾರೆ. ಮರಣಿಸಿದ ಜೀವಿಯು ಒಂದು ವರ್ಷಕ್ಕೆ ಯಮಲೋಕಕ್ಕೆ ಸೇರುತ್ತಾನೆಂದು, ಆ ದಿನ ವರ್ಷದ ದಿನವೆಂದು ಪಿಂಡಕೂಳು ಇಡುವುದರಿಂದ ಅವನ ಹಸಿವು

ತೀರಿ ಯಮಲೋಕಕ್ಕೆ ಹೋಗುವನೆಂದು ಕೆಲವರು ಹೇಳುತ್ತಿದ್ದಾರೆ. ಯಮಲೋಕಕ್ಕೆ ಹೋಗುವ ದಾರಿಯಲ್ಲಿ ದೂತರಿಂದ ಬಂಧಿಸಲ್ಪಟ್ಟು ಹೋಗುವವನು ನಾವು ಇಡುವ ಪಿಂಡ ಕೂಳನ್ನು ಹೇಗೆ ತಿನ್ನುವನು ಎಂದು ಪ್ರಶ್ನಿಸಿದಾಗ, ಸತ್ತು ಹೋದವನು ಕಾಗೆಯ ರೂಪದಲ್ಲಿ ಬಂದು ತಿಂದು ಹೋಗುತ್ತಾನೆ. ಅದನ್ನೂ ಕೇಳುತ್ತಿದ್ದೀಯ ಅಷ್ಟರ ಮಟ್ಟಿಗೆ ತಿಳಿಯುವುದಿಲ್ಲವೆ! ನೀನು ನಿಮ್ಮ ತಂದೆಗಾಗಲಿ, ನಿಮ್ಮ ತಾತನಿಗಾಗಲಿ ಪಿಂಡ ಕೂಳು ಇಡಲಿಲ್ಲವೆ? ಕಾಗೆಗಳು ತಿಂದು ಹೋಗುವುದನ್ನು ನೋಡಲಿಲ್ಲವೆ? ಎಂದು ಮಾತನಾಡುತ್ತಿದ್ದಾರೆ.

ಗುಂಟೂರು ಹೊಗೆಸೊಪ್ಪು ಗೂಡಲ್ಲಿದ್ದರೂ ಒಂದೇ ಬಾಯಲ್ಲಿದ್ದರೂ ಒಂದೇ ಎನ್ನುವಂತೆ ಕೆಲವರು ಯಾವ ವಿಷಯವನ್ನು ತಿಳಿದುಕೊಳ್ಳದೆ ತಿಳಿದುಕೊಳ್ಳಲು ಪ್ರಯತ್ನವನ್ನು ಮಾಡದೆ ಎಲ್ಲಿದ್ದರೂ ಹೇಗಿದ್ದರೂ ಸಪ್ಪೆಯಾಗಿ ರುಚಿ ಇಲ್ಲದ ಹೊಗೆ ಸೊಪ್ಪಿನ ಹಾಗೆ ಇರುತ್ತಾರೆ. ಗುಡಿವಾಡದ ಹೊಗೆಸೊಪ್ಪು ಗೂಡಲ್ಲಿದ್ದರೂ ಘಾಟೇ ಬಾಯಲ್ಲಿದ್ದರು ಘಾಟೇ ಎನ್ನುವಂತೆ ಕೆಲವರು ಪ್ರತಿಯೊಂದು ತಿಳಿದುಕೊಳ್ಳಬೇಕೆಂದು ಘಾಟಾದ ಚುರುಕುತನವನ್ನು ಹೊಂದಿರುತ್ತಾರೆ. ಅಂತಹವರ ಮನಸ್ಸಿನಲ್ಲಿ ಎಷ್ಟೋ ಪ್ರಶ್ನೆಗಳು ಉದ್ಭವಿಸುತ್ತಿರುತ್ತವೆ. ಪ್ರತಿಯೊಂದು ತಿಳಿದುಕೊಳ್ಳಬೇಕೆಂಬ ತಪನೆ ಅವರಿಗಿರುತ್ತದೆ ಅವರ ಪ್ರಶ್ನೆಗಳ ಪರಂಪರೆಗಳು ಹೀಗೆ ಇವೆ. 1) ಪಿಂಡ ಕೂಳೆಂದರೆ ಅರ್ಥವೇನು? 2) ಪಿಂಡ ಕೂಳನ್ನದೆ, ಕೂಳು ಅನ್ನಬಹುದಲ್ಲವೆ! 3) ಸತ್ತವರು ಪಿಂಡಕೂಳನ್ನು ತಿನ್ನುತ್ತಾರೆಯೆ? 4) ಹಿಂದೆ ಕರೆದುಕೊಂಡು ಹೋಗುವ ಯಮ ಕಿಂಕರರು ಪಿಂಡ ಕೂಳನ್ನು ತಿನ್ನುವ ಸಲುವಾಗಿ ನಮ್ಮ ಪೊಲೀಸಿನವರಂತೆ ಯಾವುದಾದರು ಲಂಚ ತೆಗೆದುಕೊಂಡು ಅವನನ್ನು ಬಿಡುತ್ತಾರಾ? 5) ಸತ್ತವನು ಅವರ ಕುಮಾರರು ಇಡುವ ಪಿಂಡ ಕೂಳಿಗಾಗಿ ಕಾಗೆಯ ಅವತಾರವಾಗಿ ಏಕೆ ಬರುತ್ತಾನೆ? 6) ಹಾಗೆ ಕಾಗೆಯ ಅವತಾರವೆತ್ತಿ ಬಂದು ತಿಂದುಹೋಗುತ್ತಾನೆಂಬುವುದಕ್ಕೆ ನಾನು ನಿತ್ಯ ನೋಡುತ್ತಿರುವ ಕುಂಟ ಕಾಗೆ ಸ್ಮಶಾನದಲ್ಲಿ ಎಷ್ಟೋಜನರ ಪಿಂಡಕೂಳನ್ನು ತಿಂದಿದೆ, ಈ ಕುಂಟ ಕಾಗೆಯನ್ನು ಯಾರೆಂದು ಹೇಳಬಹುದು?

7) ಪ್ರತಿದಿನ ಎಷ್ಟೋ ಲಕ್ಷಗಳಷ್ಟು ಜನರು ಕೆಲವು ಕೋಟಿಗಳ ಜೀವರಾಶಿಗಳು ಸತ್ತುಹೋಗುತ್ತಿವೆ. ಅವರನ್ನು ತೆಗೆದು ಕೊಂಡು ಹೋಗಲು ಒಬ್ಬ ಜೀವಿಗೆ ಇಬ್ಬರು ಯಮಕಿಂಕರರ ಪ್ರಕಾರವಾದರು ಯಮಕಿಂಕರರು ಎಷ್ಟು ಕೋಟಿ ಜನರು ಇರಬೇಕು? 8) ತೆಗೆದುಕೊಂಡು ಹೋಗುವವರೆ ಎಷ್ಟೋ ಕೋಟಿ ಜನರಾದರೆ ಯಮಲೋಕದಲ್ಲಿ ಪಾಪಗಳನ್ನು ಅನುಭವಿಸುತ್ತಿರುವವರು ಇನ್ನೆಷ್ಟು ಕೋಟಿ ಜನರು ಇರಬೇಕು? 9) ಅಲ್ಲಿರುವ ಯಮಕಿಂಕರರು ಇಲ್ಲಿಂದ ಹೋದವರೆಲ್ಲ ಎಷ್ಟು ಕೋಟಿ ಆಗುತ್ತಾರೆ? 10) ಯಮಲೋಕವು ಅಷ್ಟು ವಿಶಾಲವಾಗಿದೆಯೆ? 11) ಯಮಕಿಂಕರರು ಜೀವಿಯನ್ನು ತೆಗೆದುಕೊಂಡು ಹೋಗುವಾಗ ದಾರಿಯಲ್ಲಿ ಜೀವಿಗೆ ಹಸಿವಾಗುತ್ತಿದೆ ಎನ್ನುತ್ತಿದ್ದಾರೆ. 12) ಜೀವಿಗೆ ಹಸಿವಾದರೆ ಯಮಭಟರಿಗೆ ಹಸಿವಾಗುವುದಿಲ್ಲವೆ? 13) ಅವರಿಗೆ ಹಸಿವಾದರೆ ಬುತ್ತಿ ಏನಾದರೂ ತಂದುಕೊಂಡಿರುತ್ತಾರಾ? 14) ಇಲ್ಲವಾದರೆ ಜೀವಾತ್ಮ ನೊಂದಿಗೆ ಅವರೂ ಸಹ ಕೆಳಗೆ ಬಂದು ಯಾವ ಕೂಳಾದರೂ ತಿಂದು ಹೋಗುತ್ತಾರಾ? 15) ಪಿಂಡ ಕೂಳು ಇಡುವವರು ಸತ್ತು ಹೋದವನು ಕುಡುಕನಾದರೆ ಅವನಿಗೋಸ್ಕರವಾದರೂ ಸಾರಾಯಾಗಲಿ, ಬ್ರಾಂದಿಯಾಗಲಿ ಇಟ್ಟುಬರುವುದು ನೋಡಿದ್ದೇವೆ. ಪಿತರರು ಕಾಗೆಗಳಾಗಿ ಬಂದರೆ ಅಲ್ಲಿ ಇಟ್ಟಿರುವ ಸಾರಾಯಿ ಏಕೆ ಕುಡಿಯಲಿಲ್ಲ? 16) ನಮ್ಮ ಹಿರಿಯರು ಪಿಂಡ ಕೂಳನ್ನು ತಿನ್ನುವುದಕ್ಕೆ ಕಾಗೆ ರೂಪದಲ್ಲಿ ಬಂದರೆ ಅವರ ಮೇಲೆ ಪ್ರೇಮವಿರುವ ನಾವು ಹೇಗೋ ಆ ಕಾಗೆಯನ್ನು ಹಿಡಿದುಕೊಂಡು ನಮ್ಮ ತಂದೆಯೆ ಅಲ್ಲವೆ! ಎಂದು ಪ್ರೀತಿಯಿಂದ ಆ ದಿನ ಒಳ್ಳೆಯ ಭೋಜನವನ್ನು ಇಡಬಹುದಲ್ಲವೆ! ಹಾಗೆ ಹಿಡಿದುಕೊಂಡು ನಮ್ಮ ಹತ್ತಿರವೆ ಇಟ್ಟುಕೊಂಡರೆ ಅವನಿಗೆ ಯಮಲೋಕಕ್ಕೆ ಹೋಗುವ ಬಾಧೆ, ಅಲ್ಲಿ ಪಾಪ ಅನುಭವಿಸುವ ಬಾಧೆಗಳು ಎಲ್ಲ ತಪ್ಪಿ ಹೋಗುತ್ತವಲ್ಲವೆ ! ಯಾರೂ ಹಾಗೆ ಏಕೆ ಮಾಡುತ್ತಿಲ್ಲ? 17) ಬದುಕಿರುವಾಗ ಅನ್ನವಿಡದ ಮಗನು ಸತ್ತು ಹೋದ ನಂತರ ಪಿಂಡ ಕೂಳು ಇಡದಿದ್ದರೆ ಏನು? 18) ತಂದೆ ಪ್ರಾಣದಿಂದ ಇರುವಾಗ ಆತನ ಮೇಲೆ ಇರದ ಪ್ರೇಮ

ದಿವಸಗಳಂದು ಏಕೆ ಬರುತ್ತದೆ? 19) ಪೂರ್ವದಲ್ಲಿ ಜ್ಞಾನ ತಿಳಿದ ಹಿರಿಯರು ಈ ಸಂಪ್ರದಾಯಗಳನ್ನು ಇಟ್ಟಿದ್ದಾರಾ? ಇಟ್ಟಿದ್ದರೆ ಯಾವ ಉದ್ದೇಶದಿಂದ ಇಟ್ಟಿದ್ದಾರೆ? 20) ಪಿಂಡ ಕೂಳು ಏಕೆ ಇಡಬೇಕು? 21) ಎಷ್ಟು ದಿನಗಳಿಗೆ ಇಡಬೇಕು? 22) ಈ ಕಾರ್ಯದಲ್ಲಿ ಅಸಲು ಸಾರಾಂಶವಾದ ವಿಷಯವೇನಾದರೂ ಇದೆಯಾ? 23) ಇದು ವಾಸ್ತವಕ್ಕೆ ಇಂದೂ ಸಾಂಪ್ರದಾಯವೇನಾ? ಹಾಗೆ ಈ ವಿಧವಾಗಿ ಅನೇಕವಾದ ಪ್ರಶ್ನೆಗಳು ಚುರುಕಾದ ತಿಳುವಳಿಕೆ ಇರುವವರಲ್ಲಿ ಉದ್ಭವಿಸುತ್ತಿರುತ್ತವೆ. ನಿಜವಾಗಿ ಇಂತಹ ಪ್ರಶ್ನೆಗಳಿಗೆ ಉತ್ತರಗಳಿವೆಯೆ? ಎಂದು ನಾವು ಯೋಚಿಸಬೇಕಾದ ಕೆಲಸವಿದೆ. ಯೋಚಿಸಿದರೆ ಏನು ಸಮಾಧಾನ ಸಿಗುತ್ತದೆಯೋ ನೋಡೋಣ.

ಪಿಂಡವೆಂದರೆ ಶರೀರವೆಂದು ಹೇಳಬಹುದು. ಏಕೆಂದರೆ ತಾಯಿ ಗರ್ಭದಲ್ಲಿರುವುದನ್ನು ಪಿಂಡ ಎನ್ನುತ್ತಿದ್ದೇವೆ. ತಾಯಿ ಗರ್ಭದಲ್ಲಿ ಪಿಂಡ ಅಡ್ಡತಿರುಗಿದೆ ಎಂಬ ಮಾತು ಸಹ ಕೇಳುತ್ತಿರುತ್ತೇವೆ. ತಾಯಿ ಗರ್ಭದಿಂದ ಪ್ರಸವಿಸಲ್ಪಟ್ಟ ಶರೀರದಲ್ಲಿ ಆತ್ಮ ಚೈತನ್ಯವಿದ್ದು ಬೆಳೆದು ದೊಡ್ಡದಾಗಿ ಅನೇಕ ಕರ್ಮಗಳನ್ನು ಆಚರಿಸುವುದು, ಹೊಸದಾಗಿ ಅನೇಕ ಕರ್ಮಗಳನ್ನು ಸಂಪಾದಿಸಿಕೊಳ್ಳುವುದು ಎರಡು ನಡೆಯುತ್ತಿವೆ. ನಡೆಯುತ್ತಿರುವ ಕೆಲಸದಲ್ಲಿ ಎಷ್ಟು ಕರ್ಮ ಬರುತ್ತಿದೆಯೆಂದು ತಿಳಿಯದೆ ಹೋದರೂ ಆಗಿನ ಕೆಲಸದಲ್ಲಿ ಅನುಭವಿಸುವುದು ಮಾತ್ರ ತಿಳಿದು ಬರುತ್ತಿದೆ. ಅನುಭವಿಸುವಾಗ ಕೆಲವರು ಇದು ನನ್ನ ಕರ್ಮವೆಂದು ತಿಳಿಯದೆ ಹೇಳುತ್ತಿರುತ್ತಾರೆ. ಕಳೆದು ಹೋದ ಜನ್ಮದಲ್ಲಿ ಮಾಡಿಕೊಂಡ ಕರ್ಮಗಳನ್ನು ಅನುಭವಿಸುವುದಕ್ಕೆ ನಾವು ಹುಟ್ಟಿದ್ದೇವೆ. ಕ್ಷಣ ಕ್ಷಣದಲ್ಲೂ ಅನುಭವಿಸುತ್ತಿರುವುದೆಲ್ಲಾ ಕರ್ಮವೇ. ಇರುವ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದನ್ನು ಅಥವಾ ಅನುಭವಿಸುವುದನ್ನು ಕರ್ಮಾನುಭವ ಎನ್ನುತ್ತಿರುತ್ತೇವೆ. ಆಹಾರ ಪದಾರ್ಥಗಳನ್ನು ತಿಂದು ಇಲ್ಲದಂತೆ ಮಾಡಿದಹಾಗೆ ಕರ್ಮಗಳನ್ನು ಅನುಭವಿಸಿ ಇಲ್ಲದಂತೆ ಮಾಡುತ್ತಿದ್ದೇವೆ. ತಿನ್ನುವ ಅನ್ನವನ್ನು ಅಚ್ಚ ಕನ್ನಡ ಭಾಷೆಯಲ್ಲಿ **"ಕೂಳು"** ಎನ್ನುತ್ತೇವೆ. ತಿನ್ನುವುದನ್ನು "ಕುಡುಚುವುದು"

ಎನ್ನುತ್ತೇವೆ. ಕೂಳು ಕುಡುಚುವುದು ಎಂದರೆ ಅನ್ನ ತಿನ್ನುವುದು ಎಂದರ್ಥ. ಅನ್ನವನ್ನುತಿಂದು ಮುಗಿಸಿದಂತೆ ಕರ್ಮಗಳನ್ನು ಸಹ ಅನುಭವಿಸಿ ಮುಗಿಸುತ್ತಿದ್ದೇವೆ. ಆದ್ದರಿಂದ ಜೀವಿಯು ಪ್ರತಿ ನಿತ್ಯ ಕರ್ಮಗಳನ್ನು ಕುಡುಚುತ್ತಿದ್ದಾನೆಂದು ಪೂರ್ವಿಕರು ಹೇಳುತ್ತಿದ್ದರು. ನಾವು ತಿಂದು ಮುಗಿಸುವ ಅನ್ನದೊಂದಿಗೆ ಹೋಲಿಸಿ ಕರ್ಮವನ್ನು ಕೂಳು ಎನ್ನುತ್ತಿದ್ದರು. ಕರ್ಮಗಳೆಲ್ಲವನ್ನು ಸಜೀವವಾದ ಶರೀರವೇ ಅನುಭವಿಸಬೇಕಾಗಿದೆ ಆದ್ದರಿಂದ ಶರೀರವನ್ನು ಪಿಂಡವೆಂದು, ಅನುಭವಿಸುವ ಕರ್ಮಗಳನ್ನು ಕೂಳು ಎಂದು, ಒಬ್ಬ ಮನುಷ್ಯನ ಕರ್ಮವನ್ನು ಪಿಂಡ ಕೂಳೆಂದು ಎನ್ನುತ್ತಿದ್ದರು. ಶರೀರದಿಂದ ಅನುಭವಿಸುವ ಕರ್ಮವನ್ನು ತಿಳಿದ ಹಿರಿಯರು ಪಿಂಡ ಕೂಳು ಎನ್ನುತ್ತಿದ್ದರು. ಈ ಕಾಲದಲ್ಲಿ ಸಹ ಸಂದರ್ಭಾನುಸಾರ ನಿನ್ನ ಪಿಂಡ ಕೂಳು ಎನ್ನುವುದು ನಡೆಯುತ್ತಿದೆ. ನಿತ್ಯವು ಪ್ರತಿ ಜೀವಿ ಅನಿಭವಿಸುತ್ತಿರುವ ಕರ್ಮವನ್ನೇ ಪಿಂಡ ಕೂಳು ಎನ್ನುವುದು ನಡೆಯುತ್ತಿತ್ತು. ಇಂದಿಗೂ ಆಗಾಗ ಅದು ನಿನ್ನ ಕರ್ಮ ಎನ್ನುವುದರ ಬದುಲು ನಿನ್ನ ಪಿಂಡ ಕೂಳು ಎಂದು ಸ್ವತಃ ನಾವೇ ಎನ್ನುತ್ತಿರುತ್ತೇವೆ. ಕೆಲವರು ತಿಳಿಯದಿದ್ದರು ಎನ್ನುತ್ತಲೇ ಇರುತ್ತಾರೆ.

ಒಬ್ಬ ವ್ಯಕ್ತಿ ಸತ್ತುಹೋದ ನಂತರ ಬಾಹ್ಯಾರ್ಥವಾಗಿ ಪಿಂಡ ಕೂಳು ಇಡುವುದು ಪೂರ್ವದಿಂದಲು ನಡೆಯುತ್ತಿರುವ ಸಾಂಪ್ರದಾಯವಾಗಿದೆ. ಆದರೆ ಪೂರ್ವದಲ್ಲಿ ಸತ್ತು ಹೋದ ವ್ಯಕ್ತಿಗಳಿಗೆಲ್ಲರಿಗೂ ಪಿಂಡ ಕೂಳು ಇಡುತ್ತಿರಲಿಲ್ಲ. ಭಗವದ್ಗೀತೆಯಲ್ಲಿ ಹೇಳಿದಂತೆ ಮರಣಿಸಿದವನು ತನ್ನ ಜೀವನದಲ್ಲಿ ಯೋಗಿಯಾಗಿದ್ದು ಮೋಕ್ಷಾಸಕ್ತನಾಗಿದ್ದರೆ, ಭಗವದ್ಗೀತೆ ಹೇಳಿದಂತೆ ಅವನ ಮರಣವು ಹಗಲು, ಶುಕ್ಲಪಕ್ಷ, ಉತ್ತರಾಯಣವಾಗಿ ಸೂರ್ಯರಶ್ಮಿ ಬೀಳುವಾಗ ನಡೆದಿದ್ದರೆ, ಆಗ ಮರಣಿಸಿದ ಯೋಗಿ ಮತ್ತೆ ಹುಟ್ಟುವುದಿಲ್ಲವೆಂದು, ಅವನು ಮೋಕ್ಷ ಹೊಂದಿ ದೇವರಲ್ಲಿ ಐಕ್ಯವಾಗಿದ್ದಾನೆಂದು ಭಾವಿಸುತ್ತಿದ್ದರು. ಅಂತಹವನಿಗೆ ಕರ್ಮ ಇಲ್ಲವೆಂದು, ಅವನು ಇನ್ನು ಹುಟ್ಟುವುದಿಲ್ಲವೆಂದು ತಿಳಿಸುವ ಸಲುವಾಗಿ ಕರ್ಮತಂತ್ರವೆಂಬ ಹೆಸರಿನಿಂದ ಪಿಂಡ ಕೂಳು ಇಡುವುದು ನಡೆಯುತ್ತಿತ್ತು.

ಸಜೀವದಿಂದ ಇರುವ ಪ್ರತಿ ಜೀವಿಗೆ ನವಗ್ರಹಗಳಿಂದಲೇ ಕರ್ಮ ಆಚರಣೆಗೆ ಬರುತ್ತದೆ. ಮೋಕ್ಷ ಹೊಂದಿದವನಿಗೆ ನವಗ್ರಹಗಳಿಂದ ಸಂಬಂಧ ಇಲ್ಲದಂತೆ ಹೋಗುತ್ತದೆ. ಬದುಕಿರುವಾಗ ಕರ್ಮವನ್ನು ತರುವ ನವಗ್ರಹಗಳು ಮೋಕ್ಷ ಹೊಂದಿದವನಿಗೆ ಕರ್ಮ ಇಲ್ಲದಿರುವುದರಿಂದ ಗ್ರಹಗಳು ಅವನನ್ನು ಏನು ಮಾಡಲಾರವು, ಜನ್ಮಕ್ಕೆ ತರಲಾರವು. ಆದ್ದರಿಂದ ಕರ್ಮದಿಂದ ಬಿಡುಗಡೆ ಹೊಂದಿದವನೆಂದು ತಿಳಿಸುವ ಪ್ರಯುಕ್ತ ಮೋಕ್ಷ ಹೊಂದಿದವನಿಗೆ ಒಂಭತ್ತನೇ ದಿನದಂದು ಕರ್ಮತಂತ್ರಗಳನ್ನು ಮಾಡುತ್ತಿದ್ದರು.

ಮೋಕ್ಷ ಹೊಂದಿದವನಿಗೆ ಕರ್ಮವಿಲ್ಲ ಎಂದು ತಿಳಿಸುವ ಸಲುವಾಗಿ ಸತ್ತುಹೋದ ದಿನದಿಂದ ಸರಿಯಾಗಿ ಒಂಭತ್ತನೆ ದಿನದಂದು ಕರ್ಮಕ್ಕೆ ಸಮಾನವಾದ ಅನ್ನವನ್ನು ಅಂದರೆ ಪಿಂಡ ಕೂಳೆಂದು ಹೆಸರಿಟ್ಟ ಅನ್ನವನ್ನು ಬಯಲು ಪ್ರಾಂತದಲ್ಲಿ ಇಟ್ಟು, ಜಂತುಗಳಾಗಲಿ, ಪಕ್ಷಿಗಳಾಗಲಿ ತಿನ್ನುವಂತೆ ಇಟ್ಟು, ಇಡಲಾದ ಪಿಂಡ ಕೂಳನ್ನು ಇಲ್ಲದಂತೆ ಮಾಡುತ್ತಿದ್ದರು. ಹಾಗೆ ಮಾಡುವುದರಲ್ಲಿ ಪಿಂಡ ಕೂಳು ಎನ್ನುವ ಕರ್ಮ ಇನ್ನು ಇಲ್ಲವೆಂದು ಬಾಹ್ಯಾರ್ಥವಾಗಿ ತಿಳಿದುಕೊಳ್ಳಲು ಪಿಂಡಾ ಕೂಳನ್ನು ಇಲ್ಲದಂತೆ ಮಾಡುತ್ತಿದ್ದರು. ಮೋಕ್ಷ ಹೊಂದಿದವನಿಗೆ ಇಡಲಾದ ಕೂಳನ್ನು ಇತರೆ ಯಾವ ಜೀವರಾಶಿ ಗಳಾದರೂ ತಿನ್ನಬಹುದು. ಕಾಗೆಗಳೇ ತಿನ್ನಬೇಕೆಂದು ಹೇಳಿಕೊಳ್ಳುವುದು ತಪ್ಪು. ಪೂರ್ವದಲ್ಲಿ ಹಿರಿಯರು ಇಟ್ಟ ಆಚಾರಗಳೆಲ್ಲ ದಾರಿತಪ್ಪಿ ಅಧರ್ಮ ಗಳಾದಂತೆ ಈ ವಿಷಯವೂ ಸಹ ಕಾಲಗಮನದಲ್ಲಿ ತಿಳಿಯದಂತೆ ಇತರೆ ಭಾವನೆಗಳೊಳಗೆ ಹೋಗಿದೆ. ಸತ್ತು ಹೋದ ಹಿರಿಯರು ಕಾಗೆಗಳ ರೂಪದಲ್ಲಿ ಬಂದು ಆಹಾರ ತಿಂದು ಹೋಗುತ್ತಾರೆಂಬುವುದು ಬರೀ ಕಟ್ಟು ಕಥೆಯೇ ಹೊರತು ಅದರಲ್ಲಿ ಸತ್ಯವಿಲ್ಲ. ಸತ್ತು ಹೋದವನು ಮತ್ತೆ ಕಾಗೆಯಾಗಿ ಬರುವುದು ಅಸಂಭವ, ಅಸತ್ಯ. ಈ ವಿಷಯವನ್ನು ಕುರಿತು ವೇಮನ ಯೋಗಿಯೂ ಸಹ ವಿರೋಧಿಸುತ್ತಾ ಹೀಗೆ ಹೇಳಿದ್ದಾನೆ.

*ಪಿಂಡಗಳನ್ನು ಮಾಡಿ ಪಿತರರ ತಲೆಗಿಟ್ಟು*
*ಕಾಗೆಗಳಿಗಿಡುವ ಕತ್ತೆಗಳಿರಾ*
*ಹೊಲಸು ತಿನ್ನುವ ಕಾಗೆ ಪಿತರರೇಗಾಗುತ್ತಾರೆ*
*ವಿಶ್ವದಾಭಿರಾಮ ಕೇಳು ವೇಮಾ.*

ಈ ಕಾಲದಲ್ಲಿ ಸತ್ತುಹೋದ ಹಿರಿಯರನ್ನು ಕಾಗೆಗಳಿಗೆ ಹೋಲಿಸುವುದು, ಆ ಕಾಗೆಗಳಿಗೆ ಪಿಂಡಾಕೂಳು ಇಡುವುದನ್ನು ನೋಡಿ, ಅಂತವರನ್ನು ಕತ್ತೆಗಳಿರಾ ಎಂದು ಬೈಯುತ್ತಾ ಮಲವನ್ನು ತಿನ್ನುವ ಕಾಗೆ ಪಿತರರೇಗಾಗುತ್ತಾರೆಂದು ಪ್ರಶ್ನಿಸಿದ್ದಾನೆ. ಈ ಪದ್ಧತಿಯನ್ನು ತಪ್ಪೆಂದು ವೇಮನ ಯೋಗಿಯೂ ಸಹ ತನ್ನ ಪದ್ಯದಲ್ಲಿ ಹೇಳಿದ್ದಾನೆ. ಕರ್ಮವನ್ನು ಸೂಚಿಸುವ ಕೂಳನ್ನು ಇಲ್ಲದಂತೆ ಮಾಡುವುದು ಪದ್ಧತಿಯಾಗಲಿ ಕಾಗೆಗಳೇ ತಿನ್ನಬೇಕೆಂಬುವುದು ಪದ್ಧತಿ ಅಲ್ಲ. ಅಲ್ಲಿಟ್ಟಿರುವ ಆಹಾರವನ್ನು ಪಕ್ಷಿಗಳು ತಿನ್ನಬಹುದು, ಜಂತುಗಳು ತಿನ್ನಬಹುದು. ಈ ಪದ್ಧತಿ ಬಯಲು ಪ್ರಾಂತಗಳಲ್ಲಿ ಆಚರಿಸುವವರಿಗಲ್ಲದೆ, ನದಿ ದಡದಲ್ಲಿ ಕರ್ಮತಂತ್ರಗಳನ್ನು ಮಾಡುವವರು ನದಿಯಲ್ಲಿ ಬೆರಸುತ್ತಿದ್ದರು. ಆಗ ನದಿಯಲ್ಲಿನ ಜಲಚರಗಳು ಆ ಕೂಳನ್ನು ತಿನ್ನುತ್ತಿದ್ದವು. ಪಿಂಡ ಎಂದರೆ ಶರೀರವೆಂದಿದ್ದೇವಲ್ಲವೆ ಸತ್ತವನು ಮೋಕ್ಷ ಹೊಂದಿದ್ದಾನೆ. ಅಂತಹವನಿಗೆ ಇನ್ನು ಶರೀರದ ಅವಶ್ಯಕತೆ ಇಲ್ಲವೆಂದು ಪಿಂಡಾಕೂಳೆಂದು ಹೆಸರಿಟ್ಟು ಮಾಡುವುದು ಒಳ್ಳೆಯದೇ. ಆದರೆ ಸತ್ತು ಹೋದವನು ಮೋಕ್ಷಕ್ಕೆ ಹೋಗದಿದ್ದರೂ, ಅವನು ಅಜ್ಞಾನಿಯಾಗಿದ್ದರೂ, ಅವನಿಗೆ ಕರ್ಮತಂತ್ರ ಮಾಡುವುದು ವ್ಯರ್ಥವಲ್ಲವೆ! ನವಗ್ರಹಗಳ ಪ್ರಭಾವ ಈತನ ಮೇಲೆ ಇರುವುದಿಲ್ಲವೆಂದು ಒಂಭತ್ತನೇ ದಿನ ಕರ್ಮತಂತ್ರಗಳನ್ನು ಪೂರ್ವದಲ್ಲಿ ಮಾಡಿದಾಗ, ಈ ದಿನ ಒಂದು ಪದ್ಧತಿ ಎನ್ನುವುದು ಇಲ್ಲದಂತೆ ಹನ್ನೊಂದನೆ ದಿನವೆಂದು ಕೆಲವರು, ಹತ್ತನೆಯ ದಿನವೆಂದು ಕೆಲವರು, ಐದನೆಯ ದಿನವೆಂದು ಕೆಲವರು, ಮೂರನೆಯ ದಿನವೆಂದು ಕೆಲವರು, ಎಲ್ಲಕ್ಕಿಂತಲೂ

ಮುಖ್ಯವಾಗಿ ವರ್ಷದ ದಿನವೆಂದು ಕೆಲವರು ಮಾಡುವುದು ವಿಚಿತ್ರವಲ್ಲವೆ! ಶರೀರ ಆವನುಭವಿಸುವ ಕರ್ಮವನ್ನು ಪಿಂಡಾಕೂಳೆಂದು ಹೆಸರಿಟ್ಟು ಬಾಹ್ಯಾರ್ಥವಾಗಿ ಪೂರ್ವದಲ್ಲಿ ಮಾಡಲಾಗಿ ಈ ದಿನ ಪಿಂಡ ಕೂಳೆಂದು ಸಾರಾಯಿ, ಬ್ರಾಂದಿ, ಬೀಡಿ, ಸಿಗರೇಟ್ ಇಡುವುದು ವಿಚಿತ್ರವಲ್ಲವೆ! ಮತ್ತೆ ಜನ್ಮ ಹೊಂದದ ಸ್ಥಿತಿಗೆ ಸೇರಿಕೊಂಡಿದ್ದಾನೆಂದು ಮೋಕ್ಷ ಹೊಂದಿದವನಿಗೆ ಮಾಡಿದ ವಿಧಾನವನ್ನು ಮರೆತು ಯಮಲೋಕಕ್ಕೆ ಯಮಭಟರಿಂದ ತೆಗೆದುಕೊಂಡು ಹೋಗಲ್ಪಡುತ್ತದೆಂದು ಹೇಳುವುದು ಅಜ್ಞಾನವಲ್ಲವೆ! ಬಯಲಿನಲ್ಲಾದರೆ ಇತರೆ ಜಂತುಗಳು, ಪಕ್ಷಿಗಳು ಪಿಂಡ ಕೂಳನ್ನು ತಿನ್ನುವುದು, ನೀರಿನಲ್ಲಾದರೆ ಜಲಚರಗಳು ತಿಂದು ಅಲ್ಲಿ ಇಟ್ಟಿರುವುದು ಇಲ್ಲದಂತೆ ಹೋಗುತ್ತದೆ. ಶರೀರ ಕ್ಕಿರುವ ಕರ್ಮ ಹೋಗಿದೆಯೆಂದು ಪಿಂಡಾಕೂಳು ಇಟ್ಟರೆ ಯಾರ ಹೆಸರಿನಲ್ಲಿ ಇಟ್ಟಿದ್ದೇವೋ ಅವನೇ ಮತ್ತೆ ಬಂದು ತಿನ್ನುತ್ತಾನೆಂಬುವುದು ಸಮಂಜಸವಲ್ಲ.

ಶರೀರವನ್ನು ಪಿಂಡವೆಂದು, ಶರೀರ ಅನುಭವಿಸುವ ಕರ್ಮವನ್ನು ಪಿಂಡಾ ಕೂಳೆಂದು, ಕರ್ಮ ಶೇಷವಿಲ್ಲದೆ ಹೋಗುವುದನ್ನು ಪಿಂಡಾಕೂಳು ಇಲ್ಲದಂತೆ ಹೋಗುವುದೆಂದು, ನವಗ್ರಹಗಳ ಅಧೀನ ಇನ್ನಿಲ್ಲವೆಂದು ತಿಳಿಸುವುದು ಸತ್ತು ಹೋದ ದಿನದಿಂದ ಒಂಭತ್ತು ದಿನಗಳಿಗೆ ದಿನಗಳು ಮಾಡುವುದೆಂಬ ಅರ್ಥದಿಂದ ಪೂರ್ವದಲ್ಲಿ ಮಾಡುತ್ತಿದ್ದರು. **ಮಾಡಬೇಕಾಗಿರುವುದು ಮೋಕ್ಷ ಹೊಂದಿದವನಿಗೆಂದು, ಮಾಡುವವರು ಜ್ಞಾನ ತಿಳಿದವರು ಯಾರಾದರೂ ಆಗಬಹುದೆಂದು ಹಿರಿಯರು ತಿಳಿಸಿರುವಾಗ ಮಕ್ಕಳೆ ಈ ತಂತು ಮಾಡಬೇಕೆಂದು, ಮಕ್ಕಳಿಂದ ವಂಶದವರಿಂದ ಮಾಡಿಸುವುದು ಅಜ್ಞಾನವೇ ಆಗುತ್ತದೆ.** ಹೋದವನು ಮೋಕ್ಷಕ್ಕೆ ಹೋಗಿದ್ದಾನೆಂದು ತಿಳಿಸಲು ಅಷ್ಟೋ ಇಷ್ಟೋ ಜ್ಞಾನ ತಿಳಿದವರು ಈ ವಿಧಾನ ಇದು ಎಂದು ಮಾಡಿ ಇತರರಿಗೆ ತಿಳಿಸುತ್ತಾ ಹೋದರೆ ಈ ಸಾಂಪ್ರದಾಯ ಎಲ್ಲರಿಗೂ ತಿಳಿದಿರುತ್ತಿತ್ತು. ಈ ಕಾಲದಲ್ಲಿ ಪಿಂಡ ಕೂಳಿನ

ಕಾರ್ಯ ಮಾಡಬೇಕೆಂಬುವುದು ಇದೆ, ಆದರೆ ಏಕೆ ಮಾಡಬೇಕು? ಹೇಗೆ ಮಾಡಬೇಕೆಂಬ ವಿವರವು ಪೂರ್ತಿ ಇಲ್ಲದಂತೆ ಹೋಗಿದೆ. ಈಗಲಾದರೂ ಜೀವನದಲ್ಲಿ ಜ್ಞಾನ ಮತ್ತು ಯೋಗವನ್ನು ತಿಳಿದು ಮೋಕ್ಷ ಹೊಂದಬೇಕೆಂಬ ಉದ್ದೇಶ ಇರುವವರು ಸತ್ತು ಹೋದರೆ, ಭಗವದ್ಗೀತೆಯಲ್ಲಿ ಹೇಳಿದಂತೆ ಕಾಲಸೂತ್ರ ಅವರಿಗೆ ಅನ್ವಯಿಸಿದರೆ, ಅಂತಹವರಿಗೆ ಸ್ವಲ್ಪ ಜ್ಞಾನ ತಿಳಿದವರಿಂದಾಗಲಿ, ಬ್ರಾಹ್ಮಣರಿಂದಾಗಲಿ, ಯೋಗಿಗಳಾದವರಿಂದಾಗಲಿ ಈ ವಿಧಾನ ಮಾಡಿಸಬೇಕು. ಅವನು ಇಂತಹ ಮೋಕ್ಷ ಸ್ಥಿತಿಗೆ ಸೇರಿಕೊಂಡಿದ್ದಾನೆಂದು ಹೊರಗೆ ತಿಳಿಸಬೇಕು. ಹಾಗೆ ಅಲ್ಲದೆ ಸಾಧಾರಣ ಅಜ್ಞಾನಿಗಳಿಗೆಲ್ಲ ದಿವಸಗಳು ಮಾಡುವುದು, ಪಿಂಡ ಕೂಳು ಇಡುವುದು ಮಾಡಬಾರದು. ಮಾಡದೆ ಹೋದರೆ ಇವನ ಪೀಡೆ ನಮಗೆ ಅಂಟಿಕೊಳ್ಳುತ್ತದೆಂದು ತಪ್ಪದೆ ಮಾಡಿ ಈ ಪೀಡೆ ಇಲ್ಲಿಗೆ ಹೋಗಲಿ ಎಂದು ಸ್ನಾನ ಮಾಡಿ ಬರುವುದು ಸಾಂಪ್ರದಾಯ ವಿರುದ್ಧವಾಗುತ್ತದೆ. ಪೂರ್ವದಲ್ಲಿ ಹಿರಿಯರು ಈ ಕಾರ್ಯವನ್ನು ಪವಿತ್ರವಾಗಿ ಆಚರಿಸಬೇಕೆಂದಿದ್ದಾರೆ, ಆದರೆ ಅಪವಿತ್ರ, ಪೀಡೆ ಪಿಶಾಚಿ ಎಂದು ಮಾಡಬಾರದು. ಇಷ್ಟು ಹೇಳಿದರೂ ಕೆಲವರಿಗೆ ಅನುಮಾನ ಪೀಡಿಸುತ್ತಾ ಇದು ನಿಜವೇನಾ? ಈಗಿರುವ ಇಷ್ಟು ಜನರಿಗೂ, ಎಷ್ಟೋ ಜನ ಸ್ವಾಮಿಗಳಿಗೂ ಈ ವಿಷಯ ತಿಳಿಯದಂತಿರುತ್ತದಾ! ಎಂದುಕೊಂಡರೆ ನಾವೇನು ಹೇಳಲಾರೆವು.

ಇಂದೂ ಸಾಂಪ್ರದಾಯಗಳಲ್ಲಿ ಮನುಷ್ಯ ತನ್ನ ಶರೀರಕ್ಕೆ ತಗುಲಿಸಿಕೊಂಡ ಆಚಾರಗಳಲ್ಲಿ ಕೆಲವನ್ನು ತಿಳಿದುಕೊಳ್ಳಬೇಕಾಗಿರುವವು ಇವೆ. ಅಂತಹವುಗಳಲ್ಲಿ ಎಷ್ಟೋ ಆಚರಣೆಗಳು ಅರ್ಥಗಳನ್ನು ನಮ್ಮ ರಚನೆಗಳಲ್ಲಿನ **"ದೇವಾಲಯ ರಹಸ್ಯಗಳು"** ಎಂಬ ಪುಸ್ತಕದಲ್ಲಿ ಇವೆ. ಜಿಜ್ಞಾಸಿಗಳು ದೇವಾಲಯ ರಹಸ್ಯಗಳನ್ನು ಓದಿ ತಿಳಿದುಕೊಳ್ಳಬೇಕೆಂದು ಕೋರುತ್ತಿದ್ದೇವೆ.



# ದಕ್ಷಿಣ ದಿಕ್ಕಿಗೆ ತಲೆ ಇಡುವುದು

ಭಗವದ್ಗೀತೆಯಲ್ಲಿ ಯೋಗಿಗಳಾದವರು ಯಾವಾಗ ಮರಣಿಸಿದರೆ ಮೋಕ್ಷ ಹೊಂದುವರೋ, ಯಾವಾಗ ಮರಣಿಸಿದರೆ ಜನ್ಮಕ್ಕೆ ಹೋಗುವರೋ ತಿಳಿಸಿದ್ದಾರೆ. ಯೋಗಿ ಅಲ್ಲದವರು ಸರ್ವಸಾಧಾರಣವಾಗಿ ಯಾವಾಗ ಮರಣಿಸಿದರೂ ಜನ್ಮಕ್ಕೇ ಹೋಗುತ್ತಿರುವರು. ಯೋಗಿಗಳಾದವರು ಮಾತ್ರವೇ ಮೋಕ್ಷ ಹೊಂದುವುದಕ್ಕೆ ಅವಕಾಶವಿದೆ, ಆದ್ದರಿಂದ ಅವರಲ್ಲಿ ಯಾರು ಮೋಕ್ಷ ಹೊಂದಿದ್ದಾರೋ ತಿಳಿದುಕೊಳ್ಳುವುದಕ್ಕೆ ಕಾಲದ ಗತಿಗಳನ್ನು ಗೀತೆಯಲ್ಲಿ ಹೇಳಿದ್ದಾರೆ. ಅದರ ಪ್ರಕಾರ ಮೋಕ್ಷ ಹೊಂದಿದವನನ್ನು ಸುಲಭವಾಗಿ ಗುರುತಿಸಬಹುದು. ಹಾಗೆ ಮೋಕ್ಷ ಹೊಂದಿದವನನ್ನು ಪೂರ್ವದಲ್ಲಿ **'ಕಾಲವಾಗಿ ಹೋಗಿದ್ದಾನೆ'** ಎನ್ನುತ್ತಿದ್ದರು. ಕಾಲವಾಗಿ ಹೋಗಿದ್ದಾನೆಂದರೆ ಪರಮಾತ್ಮನಲ್ಲಿ ಬೆರೆತು ಹೋಗಿದ್ದಾನೆ, ಜನ್ಮಗಳಿಗೆ ಹೋಗಲಿಲ್ಲವೆಂದು ಅರ್ಥ. ಪರಮಾತ್ಮ ಕಾಲಸ್ವರೂಪನು. ಗೀತೆಯಲ್ಲಿ **"ಕಾಲೋಸ್ಮಿ"** ಕಾಲವೇ ನಾನು ಎಂದಿದ್ದಾನೆ. ಆದ್ದರಿಂದ ಮುಕ್ತಿ ಹೊಂದಿದವನನ್ನು ಕಾಲವಾಗಿ ಹೋಗಿದ್ದಾನೆನ್ನುವುದು ಸರಿಯಾದ ಮಾತು. ಮೋಕ್ಷ ಹೊಂದಿದವನನ್ನು ಮರಣಿಸಿದ್ದಾನೆಂದು, ಸತ್ತು ಹೋಗಿದ್ದಾನೆಂದು ಹೇಳಬಾರದು. ಸರ್ವಸಾಧಾರಣ ವ್ಯಕ್ತಿಗಳಿಗು, ಮತ್ತು ಮೋಕ್ಷ ಹೊಂದದ ಯೋಗಿಗಳಿಗೆ ಸತ್ತುಹೋಗಿದ್ದಾನೆಂಬ ಮಾತು ಅನ್ವಯಿಸುತ್ತದೆ. ಮುಕ್ತಿ (ಮೋಕ್ಷ) ಹೊಂದಿದವರಿಗೆ, ಹೊಂದದವರಿಗೆ ಇರುವ ವ್ಯತ್ಯಾಸವನ್ನು ಎಲ್ಲರೂ ಗುರುತಿಸುವಂತೆ ಸತ್ತು ಹೋದಾಗ, ಕರ್ಮಕಾಂಡ ಮಾಡುವಾಗ, ಸ್ಮಶಾನದಲ್ಲಿ ಊತಿಡುವಾಗ ವ್ಯತ್ಯಾಸಗಳನ್ನು ಕಲ್ಪಿಸಿದ್ದಾರೆ.

**ಸತ್ತು ಹೋಗಿದ್ದಾನೆಂದು ಮೋಕ್ಷ ಹೊಂದದವರನ್ನು ಕುರಿತು ಹೇಳಿದರೆ, ಕಾಲವಾಗಿ ಹೋಗಿದ್ದಾನೆಂದು ಮುಕ್ತಿ (ಮೋಕ್ಷ) ಹೊಂದಿದವನನ್ನು ಕುರಿತು ಹೇಳುತ್ತಿದ್ದರು. ಹಾಗೆ ಮುಕ್ತಿ ಹೊಂದದವನಿಗೆ ಪಿಂಡ ಕೂಳು ಇಡುವ ಕಾರ್ಯ**

**ಮಾಡುವವರಲ್ಲ. ಮೋಕ್ಷ ಹೊಂದಿದವನಿಗೆ ಮಾತ್ರವೆ ಪಿಂಡ ಕೂಳು ಇಡುತ್ತಿದ್ದರು.** ಕರ್ಮದಿಂದ ಬಿಡುಗಡೆ ಮುಕ್ತಿ ಹೊಂದಿದವನಿಗೆ ಮಾತ್ರವೆ ಶವಯಾತ್ರೆಯಲ್ಲಿ ಭಾರಇಳಿಸುವ ಸ್ಥಳ ಇರುತ್ತಿತ್ತು. ಸತ್ತು ಹೋದವನಿಗೆ ಭಾರ ಇಳಿಸುವ ಸ್ಥಳ ಇರುತ್ತಿರಲಿಲ್ಲ. ಹಾಗೆಯೇ ಮೃತದೇಹವನ್ನು ಭೂಮಿಯಲ್ಲಿ ಊತಿಡುವಾಗಲೂ ಸಹ ಸಾಧಾರಣವಾಗಿ ಸತ್ತುಹೋದವರನ್ನು ಗುಣಿಯಲ್ಲಿ ದಕ್ಷಿಣ ದಿಕ್ಕಿಗೆ ತಲೆ ಇಟ್ಟು ಮಲಗಿಸಿದರೆ, ಕಾಲವಾಗಿ ಮುಕ್ತಿ ಹೊಂದಿದವರನ್ನು ಉತ್ತರ ದಿಕ್ಕಿಗೆ ತಲೆ ಇಟ್ಟು ಊತಿಡುತ್ತಿದ್ದರು. ಈ ವಿಧವಾಗಿ ಸತ್ತು ಹೋದವರಲ್ಲಿ ಎಲ್ಲ ಪದ್ಧತಿಗಳಲ್ಲಿಯೂ ವ್ಯತ್ಯಾಸವನ್ನು ಕಲ್ಪಿಸಿ ಮೋಕ್ಷಕ್ಕೆ ಗುರುತನ್ನು ಬೆಲೆಯನ್ನು ತಿಳಿಸಿದ್ದಾರೆ. ಪೂರ್ವದಲ್ಲಿ ಹಿರಿಯರು ಎಷ್ಟೋ ಅರ್ಥ ಭಾವಗಳಿಂದ ಧರ್ಮಯುಕ್ತವಾಗಿ ಕಲ್ಪಿಸಿದ ಕೆಲಸಗಳೂ ಸಹ ಪೂರ್ತಿ ಅರ್ಥಹೀನವಾಗಿ ಹೋಗಿ ಅಧರ್ಮ ಆಚರಣೆಯಾಗಿ ತಯಾರಾಗಿವೆ. ಪೂರ್ವದಲ್ಲಿ ಸಾಂಪ್ರದಾಯ ಬದ್ಧವಾಗಿ ಇಟ್ಟಿರುವ ಆಚರಣೆಗಳೆಲ್ಲವುಗಳಲ್ಲಿ ಕೆಲವು ಇಂದಿಗೂ ಇದ್ದರೂ ಏಕೆ ಮಾಡಬೇಕು? ಯಾರಿಗೆ ಮಾಡಬೇಕೆಂದು ತಿಳಿಯದಂತೆ ಹೋಗಿವೆ. ಇಲ್ಲಿಯವರೆಗೂ ಮನುಷ್ಯ ಮೃತವಾದ ನಂತರ ಶವಯಾತ್ರೆಗೂ, ಭಾರ ಇಳಿಸುವ ಸ್ಥಳಕ್ಕೂ ಇಂದೂ ಸಾಂಪ್ರದಾಯದ ಪ್ರಕಾರ ಅರ್ಥ ಹೇಳಿಕೊಂಡಿದ್ದೇವೆ. ಈಗ ಮೃತದೇಹದ ಖನನವನ್ನು ಕುರಿತು ತಿಳಿದುಕೊಳ್ಳೋಣ.

ಭೂಮಿ ಮೇಲೆ ಸೂರ್ಯೋದಯ ಪೂರ್ವದಿಕ್ಕಿನಲ್ಲಿ ನಡೆಯುತ್ತದೆ. ಪೂರ್ವದಿಕ್ಕಿನಿಂದ ಮೊದಲಿಟ್ಟು ನೋಡಿದರೆ ಪೂರ್ವಕ್ಕೆ ಪೂರ್ತಿಯಾಗಿ ವಿರುದ್ಧ ದಿಕ್ಕನ್ನು ಪಶ್ಚಿಮ ದಿಕ್ಕು ಎನ್ನುತ್ತಿದ್ದೇವೆ. ಹಾಗೇ ಪೂರ್ವಕ್ಕೆ ತಿರುಗಿ ನೋಡಿದಾಗ ಹಿಂದೆ ಇರುವುದು ಪಶ್ಚಿಮ ಆದಾಗ ಬಲಗಡೆ ದಕ್ಷಿಣ ದಿಕ್ಕೆಂದೂ, ಎಡಗಡೆ ಉತ್ತರ ದಿಕ್ಕೆಂದೂ ಹೇಳುತ್ತಿದ್ದೇವೆ. ಪೂರ್ವಕ್ಕೂ, ದಕ್ಷಿಣಕ್ಕೂ ಮಧ್ಯದಲ್ಲಿರುವ ಮೂಲೆಯನ್ನು ಆಗ್ನೇಯ ದಿಶ ಎಂದೂ, ದಕ್ಷಿಣಕ್ಕೂ ಪಶ್ಚಿಮಕ್ಕೂ ಇರುವ

ಮೂಲೆಯನ್ನು ನೈರುತ್ಯ ದಿಶ ಎಂದು, ಪಶ್ಚಿಮಕ್ಕೂ ಉತ್ತರಕ್ಕೂ ಮಧ್ಯದಲ್ಲಿರುವ ದಿಶವನ್ನು ವಾಯುವ್ಯ ದಿಶ ಎಂದೂ, ಉತ್ತರಕ್ಕೂ ಪೂರ್ವಕ್ಕೂ ಮಧ್ಯದಲ್ಲಿರುವ ಮೂಲೆಯನ್ನು ಈಶಾನ್ಯ ದಿಶ ಎನ್ನುತ್ತಿದ್ದೇವೆ. ಒಟ್ಟಾಗಿ ಎಂಟು ದಿಕ್ಕು (ದಿಶ) ಗಳಲ್ಲಿ ದಕ್ಷಿಣ ಉತ್ತರ ಎರಡು ದಿಶಗಳು ಮನುಷ್ಯ ಮರಣದ ನಂತರ ನೋಡಬೇಕಾದ ಮುಖ್ಯವಾದ ದಿಕ್ಕುಗಳು. ಮನುಷ್ಯ ಬದುಕಿರುವಾಗ ಮುಖ್ಯವಾಗಿ ಗಮನಿಸಬೇ ಕಾದ ದಿಶಗಳು ಪೂರ್ವ ಪಶ್ಚಿಮ. ಪ್ರತಿ ನಿತ್ಯ ಉದಯಿಸುವ ಸೂರ್ಯನು, ಅಸ್ತಮಿಸುವ ಸೂರ್ಯನನ್ನು ನೋಡಿ ಮನುಷ್ಯನ ಹುಟ್ಟುವಿಕೆ ಉದಯಿಸುತ್ತಿರುವ ಸೂರ್ಯನೊಂದಿಗೆ ಸಮಾನವಾಗಿ, ಹಾಗೇ ಮನುಷ್ಯನ ಸಾವನ್ನು ಅಸ್ತಮಿಸುವ ಸೂರ್ಯನಿಗೆ ಸಮಾನವಾಗಿ ಹೋಲಿಸಿ ಹೇಳಿ ಕೊಳ್ಳುತ್ತಿದ್ದರು. ಪ್ರತಿ ನಿತ್ಯವು ನಡೆಯುವ ಸೂರ್ಯೋದಯ ಸೂರ್ಯಾಸ್ತಮ ಜನನ ಮರಣಗಳನ್ನು ಸೂಚಿಸುತ್ತಿರುವಾಗ ಆ ದಿಶಗಳಾದ ಪೂರ್ವ ದಿಕ್ಕು ಮನುಷ್ಯನ ಹುಟ್ಟುವಿಕೆಗೂ, ಪಶ್ಚಿಮ ದಿಕ್ಕು ಮರಣಕ್ಕೂ ಪ್ರತೀಕಗಳಾಗಿವೆ. ಹಾಗೆಯೇ ಉತ್ತರ ದಿಶ ಮನುಷ್ಯ ಮೋಕ್ಷಕ್ಕು, ದಕ್ಷಿಣ ದಿಶ ಮನುಷ್ಯನ ಜನ್ಮಕ್ಕೂ ಪ್ರತೀಕಗಳಾಗಿ ನಿಂತಿವೆ.

ದಕ್ಷಿಣದಲ್ಲಿ ಯಮಪುರಿ ಇದೆ ಎಂದು, ದಕ್ಷಿಣ ದಿಕ್ಕಿನಲ್ಲಿ ಯಮಧರ್ಮ ರಾಜ ಇದ್ದಾನೆಂದು ಅಲ್ಲಲ್ಲಿ ಕೆಲವರು ಪುರಾಣಗಳಲ್ಲಿಯೂ ಸಹ ಹೇಳಿಕೊಳ್ಳುತ್ತಿದ್ದಾರೆ. ವಾಸ್ತವಕ್ಕೆ ದಕ್ಷಿಣ ದಿಕ್ಕಿನಲ್ಲಿ ಯಮಪುರಿ ಆಗಲಿ, ಯಮಧರ್ಮರಾಜನಾಗಲಿ ಇಲ್ಲ. ಆದರೆ ದಕ್ಷಿಣ ದಿಕ್ಕಿನಲ್ಲಿ ಯಮಧರ್ಮರಾಜು ಇದ್ದಾನೆಂದು ಹೇಳುವುದರಲ್ಲಿ ಸ್ವಲ್ಪ ಅರ್ಥವಿದೆ. **"ದಂಡಾನಾಧಿಕಾರಿಗಳಲ್ಲಿ ಯಮನು ನಾನೇ"** ಎಂದು ಗೀತೆಯಲ್ಲಿ ಭಗವಂತನು ತಿಳಿಸಿದ್ದಾನೆ. ಪರಮಾತ್ಮ ಆತ್ಮರೂಪವಾಗಿ ಶರೀರದಲ್ಲಿ ನಿವಾಸಿಸುತ್ತಿದೆ ಎಂದು ವೊದಲೇ ತಿಳಿದುಕೊಂಡಿದ್ದೇವೆ. ಆತ್ಮ ಶರೀರದಲ್ಲಿ ಯಮನಾಗಿ, ಇತರರ ಶರೀರದಿಂದ

ಯಮ ಕಿಂಕರರಾಗಿ ಚಲಾವಣಿ ಆಗುತ್ತಿದೆ ಎಂದೂ ಸಹ ನಮ್ಮ ರಚನೆಯಲ್ಲಿನ **"ಪ್ರಬೋಧ"** ಗ್ರಂಥದಲ್ಲಿ ತಿಳಿಸಿದ್ದೇವೆ. ಇದನ್ನನುಸರಿಸಿ **ಶರೀರದಲ್ಲಿ ನಿವಾಸಿಸುತ್ತಿರುವ ಎರಡನೇ ಆತ್ಮವೇ ಯಮಧರ್ಮರಾಜ ಎಂದು ತಿಳಿಯಬೇಕು.** ಇಲ್ಲಿ ಎಲ್ಲರಿಗೂ ತಿಳಿಯದ ಮತ್ತೊಂದು ವಿಷಯವೂ ಸಹ ಇದೆ. ಅದು ಏನೆಂದರೆ! ಶರೀರವೆಲ್ಲ ವ್ಯಾಪಿಸಿರುವ ಆತ್ಮ ಬ್ರಹ್ಮನಾಡಿಯಲ್ಲಿನ ಏಳನೇ ಕೇಂದ್ರವಾದ ತಲೆಯಲ್ಲಿ ಕೇಂದ್ರೀಕೃತವಾಗಿದೆ. ಆತ್ಮ ತಲೆಯಲ್ಲಿ ಕೇಂದ್ರೀಕೃತವಾಗಿ ತನ್ನ ಶಕ್ತಿಯನ್ನು ಶರೀರವೆಲ್ಲ ವ್ಯಾಪಿಸುವಂತೆ ಮಾಡುತ್ತದೆ. ತಲೆ ಮಧ್ಯದಲ್ಲಿರುವ ಆತ್ಮ ಪೂರ್ತಿ ಮಧ್ಯದಲ್ಲಿ ಅಲ್ಲದೆ ಸ್ವಲ್ಪ ಬಲಗಡೆ ಹೆಚ್ಚಾಗಿ ಇರುವುದರಿಂದ ಶರೀರ ಬಲದಲ್ಲಿಯೂ ಸಹ ಬಲಗಡೆ ಸ್ವಲ್ಪ ವ್ಯತ್ಯಾಸ ಏರ್ಪಟ್ಟಿದೆ. ಬಲಭಾಗ ಎಡಭಾಗಗಳಲ್ಲಿ ಬಲ (ಶಕ್ತಿ) ದಲ್ಲಿ ವ್ಯತ್ಯಾಸ ಎಲ್ಲರಿಗೂ ತಿಳಿದ ವಿಷಯವೆ. ಆತ್ಮ ಸಾಧಾರಣವಾಗಿ ಎಲ್ಲರಿಗೂ ಬಲಗಡೆ ಸ್ವಲ್ಪ ಹೆಚ್ಚಾಗಿ ಇರುವುದರಿಂದ ಆತ್ಮಕ್ಕೆ "ದಕ್ಷಿಣನೆಂದು", ಯಮನೆಂದು ಹೆಸರು ಇದೆ. ಬಲಗಡೆ ಹೆಚ್ಚಾಗಿ ನಿವಾಸವಿರುವುದರಿಂದ ಯಮಪುರಿ ದಕ್ಷಿಣದಲ್ಲಿದೆ ಎಂದು ಪೂರ್ವಕಾಲದಲ್ಲಿ ಹೇಳುತ್ತಿದ್ದರು. ದಕ್ಷಿಣ ಎಂದರೆ ಶರೀರದ ಹೊರಗಡೆ ಎಂದುಕೊಳ್ಳಬಾರದು. ಶರೀರದ ಒಳಗಡೆಯೇ ದಕ್ಷಿಣ ದಿಕ್ಕಿನಲ್ಲಿ (ಬಲಗಡೆ) ಎಂದು ಅರ್ಥ ಮಾಡಿಕೊಳ್ಳಬೇಕು.

ಕರ್ಮ ಉಳಿದು ಮರುಜನ್ಮ ಉಂಟಾದವರೆಲ್ಲರಿಗೂ ಆತ್ಮ ಸಂಬಂಧ ಇದ್ದೇ ಇರುತ್ತದೆ. ಜೀವಿಯು ಶರೀರಧಾರಿಯಾಗಿರುವವರೆಗೂ ಆತ್ಮ ಜೊತೆಯಲ್ಲಿದ್ದು ಮಾಡುವ ಕರ್ಮಗಳನ್ನು ಕರ್ಮದ ಖಾತೆಯಲ್ಲಿ ಹೆಚ್ಚಿಸಿಕೊಳ್ಳುವುದು, ಮತ್ತೆ ಅವುಗಳನ್ನು ಕಾಲಾನುಗುಣವಾಗಿ ಅನುಭವಿಸುವಂತೆ ಆತ್ಮ ಮಾಡುತ್ತಿದೆ. ಶರೀರದಲ್ಲಿ ಯಮನಾಗಿ ಕರ್ಮವನ್ನು ಅನುಭವಿಸುವಂತೆ ಮಾಡುವುದರಲ್ಲಿಯೂ, ಕರ್ಮವನ್ನು ದಾಖಲು (ರೆಕಾರ್ಡು) ಮಾಡುವುದರಲ್ಲಿ

ಚಿತ್ರಗುಪ್ತನಾಗಿಯೂ ಕೆಲಸ ಮಾಡುತ್ತಿದೆ. ಈ ತತಂಗವು ಶರೀರ ಇರುವವರಿಗೆ ನಡೆಯುತ್ತದೆ. ಆದ್ದರಿಂದ ಮರಣಿಸಿದವನು ಮತ್ತೆ ಜನ್ಮಕ್ಕೆ ಹೋಗುವನೆಂದು ತಿಳಿದುಕೊಂಡಾಗ, ಇವನು ಮೋಕ್ಷ ಹೊಂದಲಿಲ್ಲ, ಇವನು ಆತ್ಮದೊಂದಿಗೆ ಸೇರಿ ಜನ್ಮ ತೆಗೆದುಕೊಳ್ಳುತ್ತಿದ್ದಾನೆಂದು ತಿಳಿಯುವಂತೆ ದಕ್ಷಿಣ ದಿಕ್ಕಿಗೆ ತಲೆಯನ್ನಿಟ್ಟು ಊತಿಡುತ್ತಿದ್ದರು. ಆತ್ಮದ ಕಡೆ ಹೋಗುವವನನ್ನು ದಕ್ಷಿಣಕ್ಕೆ, ಪರಮಾತ್ಮನಕಡೆಗೆ ಹೋಗುವವನನ್ನು ಉತ್ತರದ ಕಡೆಗೆ ತಲೆಯನ್ನಿಟ್ಟು ಊತಿಡುತ್ತಿದ್ದರು. ಗೀತೆಯಲ್ಲಿ ಹೇಳಿರುವ ಕಾಲದ ಪ್ರಕಾರ ಯೋಗಿಗಳು ಮರಣಿಸಿದಾಗ, ಅವರು ಮೋಕ್ಷಕ್ಕೆ ಅರ್ಹರಾದರೆ ಅಂತಹವರನ್ನು ದಕ್ಷಿಣ ದಿಕ್ಕಿಗೆ ತಲೆ ಇಟ್ಟು ಊತಿಡುವುದಿಲ್ಲ. ಮೋಕ್ಷ ಹೊಂದಿದ ಯೋಗಿಗಳ ಶರೀರಗಳನ್ನು ಉತ್ತರ ದಿಕ್ಕಿಗೆ ತಲೆಯನ್ನಿಟ್ಟು ಊತಿಡುವುದು ನಡೆಯುತ್ತಿತ್ತು. ಈ ಕಾಲದಲ್ಲಿ ಎಲ್ಲರನ್ನೂ ದಕ್ಷಿಣ ಕಡೆಗೆ ಊತಿಡುವುದು ನಡೆಯುತ್ತಿದೆ. ಪೂರ್ವದಲ್ಲಿ ಎಷ್ಟೋ ದೊಡ್ಡ ಅರ್ಥದಿಂದ ನಿರ್ಮಿಸಿದ ಶರೀರವನ್ನು ಊತಿಡುವ ಸಾಂಪ್ರದಾಯ ತಿಳಿಯದಂತೆ ಹೋಗಿ ಆಚರಣೆ ಮಾತ್ರ ದಾರಿ ತಪ್ಪಿ ಉಳಿದುಕೊಂಡಿದೆ. ಜನ್ಮಕ್ಕೆ ಹೋಗುವವರನ್ನು ದಕ್ಷಿಣ ದಿಕ್ಕಿಗೆ, ಮೋಕ್ಷಕ್ಕೆ ಹೋಗಿರುವವರನ್ನು ಉತ್ತರ ದಿಕ್ಕಿಗೆ ತಲೆಯನಿಟ್ಟು ಊತಿಡುವುದರಲ್ಲಿ ಇರುವ ಜ್ಞಾನವನ್ನು ನಾವು ತಿಳಿದುಕೊಂಡರೆ ಎಷ್ಟೋ ಒಳ್ಳೆಯದು. ಇತರರಿಗೆ ತಿಳಿಸಿದರೆ ಜ್ಞಾನದ ಸೇವೆ ಮಾಡಿದವರಾಗುತ್ತೇವೆ.



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೊ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕು ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**



**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯ ಅಲ್ಲ, ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯ ಅಲ್ಲ.**



# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ





**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ–509381

e-mail id : info@dravidashreshtisangham.org

***www.dravidashreshtisangham.org***

# ಇಂದೂ ಸಂಪ್ರದಾಯಗಳು

ಪ್ರಮುಖರ ಲೇಖನ

ಸಾಕ್ಷಿ ತೆಲುಗು ನ್ಯೂಸ್ ಪೇಪರ್, 21-01-2014



## ಇಂದೂ ದೇಶವೇ ಇಂಡಿಯಾ!

ಹಿಮಾಲಯಗಳಿಗು, ವಿಂಧ್ಯಪರ್ವತಗಳಿಗು ಮಧ್ಯದಲ್ಲಿ ಅಂದಿನ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೊ ನಮ್ಮ ದೇಶ ಭೂಪಟದಲ್ಲಿ ನೀನು ನೋಡಿದ್ದೀಯಾ. ಅದು ಬಾಲ ಚಂದ್ರಾಕಾರವಾಗಿ ಇದ್ದಹಾಗೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿದೆ.

ರಾಮಾಯಣ ಹುಟ್ಟಿದ ಬಹಳ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ, ಆರ್ಯರ ಮಧ್ಯೆ ಏರ್ಪಟ್ಟ ಕುಟುಂಬ ಕಲಹವೇ ಭಾರತ ಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಇಷ್ಟೂ ಅಷ್ಟೂ ಅಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವುಗಳೆಲ್ಲವುಕ್ಕಿಂತ ದೊಡ್ಡದಾದ ಭಗವದ್ಗೀತೆ ಅನ್ನುವ ಮಹಾ ಗ್ರಂಥ ಮಹಾಭಾರತದಲ್ಲಿರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮವಾದುದಾಗಿದೆ. ಸಾವಿರ ಸಂವತ್ಸರಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ದೊಡ್ಡ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದ ಮಕ್ಕಳು, ಪ್ರಯೋಜನ ಹೊಂದದ ಹಿರಿಯರಂತೂ ಇರುವುದಿಲ್ಲ.

•ನೆಹ್ರೂ ಇಂದಿರಾಗೆ ಬರೆದ ಲೇಖನದಿಂದ